RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೫, ೨೦೧೩ (ಭಾದ್ರಪದ ೧೪, ಶಕ ವರ್ಷ ೧೯೩೫)<br>**Bangalore, Thursday, September 5, 2013 (Bhadrapada 14, Shaka Varsha 1935)** | ಸಂಚಿಕೆ ೩೬<br>**Issue 36** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 237 ರಾಲೆಪ 2013 ಬೆಂಗಳೂರು, ದಿನಾಂಕ : 22–07–2013**

ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ, ಇವರು ಆಂತರಿಕ ಆರ್ಥಿಕ ಸಲಹೆಗಾರರು, ಲೋಕೋಪಯೋಗಿ ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 2011ನೇ ಸಾಲಿನಲ್ಲಿ ಲೋಕೋಪಯೋಗಿ ಇಲಾಖೆ ಮಾಗಡಿ ಉಪ ವಿಭಾಗದಲ್ಲಿ ರಸ್ತೆ ಕಾಮಗಾರಿಗಳಿಗಾಗಿ ವಿಹಿತಾಚಾರಗಳನ್ನು ಪಾಲಿಸದೆ, ಲೋಕೋಪಯೋಗಿ ಇಲಾಖೆ ಸಂಹಿತೆಯನ್ನು ಉಲ್ಲಂಘಿಸಿ Non-Budgeted ಕಾಮಗಾರಿಗಳಿಗಾಗಿ ಅಕ್ರಮವಾಗಿ ಹಣ ಬಿಡುಗಡೆ ಮಾಡಿರುವುದು ಕಂಡುಬಂದಿರುವುದರಿಂದಲೂ.

ಅನುದಾನಗಳ ಬಿಡುಗಡೆಗೆ ಸಂಬಂಧಪಟ್ಟಂತೆ ತನ್ನ ಶಾಖೆಯಲ್ಲಿ ಯಾವುದೇ ವಹಿಯನ್ನಾಗಲಿ, ದಾಖಲೆಗಳನ್ನಾಗಲಿ, ದೃಢೀಕೃತ ಪ್ರತಿಗಳನ್ನಾಗಲಿ, ನಿರ್ವಹಿಸದೇ ಇರುವುದು ಕಂಡು ಬಂದಿರುವುದರಿಂದಲೂ,

ಅನುದಾನಗಳನ್ನು ಬಿಡುಗಡೆ ಮಾಡುವಾಗ ಹಣ ಬಳಕೆ ಪ್ರಮಾಣ ಪತ್ರ, ಕಾಮಗಾರಿಗಳ ಭೌತಿಕ ಪ್ರಗತಿ ಇತ್ಯಾಧಿಗಳ ಕುರಿತ ವರದಿಗಳನ್ನು ಪಡೆಯದೇ ಇರುವುದು ಕಂಡು ಬಂದಿರುವುದರಿಂದಲೂ,

ಒಂದೇ ದಿನದಲ್ಲಿ ಒಂದಕ್ಕಿಂತ ಹೆಚ್ಚು ಪತ್ರದ ಮೂಲಕ ಹಲವಾರು ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿ ಕರ್ನಾಟಕ ಆರ್ಥಿಕ ಸಂಹಿತೆಯ ವಿಧಿ ವಿಧಾನಗಳನ್ನು ಉಲ್ಲಂಘಿಸಿರುವುದು ಕಂಡು ಬಂದಿರುವುದರಿಂದಲೂ,

ಮೇಲಿನ ಅಕ್ರಮಗಳಿಗಾಗಿ ಶ್ರೀ ಆರ್. ಗೋವಿಂದರಾಜು ಅವರ ವಿರುದ್ಧ ಪೊಲೀಸ್ ಠಾಣೆ, ಕೆ.ಎಲ್.ಎ. ರಾಮನಗರ ಠಾಣೆ, ರಾಮನಗರ ಜಿಲ್ಲೆ, ಅಪರಾಧ ಸಂಖ್ಯೆ : 05/2013 ದಿನಾಂಕ : 18–04–2013, ಕಲಂ 13(1)(ಸಿ)ಡಿ ಸಹವಾಚ 13(2) & 9, 11, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 & 23 ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ 364,406,409,477(ಎ) ಐಪಿಸಿ ಪ್ರಕಾರ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗದಿಂದ ಮೊಕದ್ದಮೆಯು ದಾಖಲಿಸಲ್ಪಟ್ಟು ತನಿಖೆ ನಡೆಯುತ್ತಿರುವುದರಿಂದಲೂ,

ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗ ತನಿಖೆಯನ್ನು ಕಾಯ್ದಿಟ್ಟು ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಪ್ರಸ್ತುತ ಮುಖ್ಯ ಲೆಕ್ಕಾಧಿಕಾರಿ, ಕೃಷಿ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧ ಲೋಕಾಯುಕ್ತ ಪೊಲೀಸು ತನಿಖೆಯನ್ನು ಕಾಯ್ದಿಟ್ಟು, ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಲೀನ್ ಅನ್ನು ಹಣಕಾಸು ಅಧಿಕಾರಿ, ಪಶುವೈದ್ಯಕೀಯ ಕಾಲೇಜು, ಬೀದರ್ ಇಲ್ಲಿಗೆ ವರ್ಗಾಯಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಆರ್. ಗೋವಿಂದರಾಜು ಅವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಶ್ರೀ ಆರ್. ಗೋವಿಂದರಾಜು ಅವರ ಸ್ಥಾನದಲ್ಲಿ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆಯನ್ನು ಮಾಡಲು ಆಯುಕ್ತರು, ಕೃಷಿ ಇಲಾಖೆ ಹಾಗೂ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

P.R. 782

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಇಲಾಖಾ ಮಟ್ಟದ ಸರ್ಕಾರದ ಸರ್ವೋತ್ತಮ ಸೇವಾ ಪ್ರಶಸ್ತಿ ನೀಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ : 20–11–2012ರ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ:105:ಇಆಸು:2011.

2. ಸಂಖ್ಯೆ:ಗ್ರಾಅಪ:212:ಇತರೆ:2012, ದಿನಾಂಕ : 28–03–2013ರ ಅನಧಿಕೃತ ಟಿಪ್ಪಣಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ:105:ಇಆಸು:2011. ದಿನಾಂಕ : 20–11–2012ರಲ್ಲಿ ರಾಜ್ಯ ಸರ್ಕಾರವು ಅತ್ಯುನ್ನತ ಸೇವೆಗೈದ/ಸಾಧನೆಗೈದ ರಾಜ್ಯ ಸರ್ಕಾರಿ ನೌಕರರಿಗೆ **"ಸರ್ವೋತ್ತಮ ಸೇವಾ ಪ್ರಶಸ್ತಿ"** ನೀಡುವ ಬಗ್ಗೆ ಯೋಜನೆಯನ್ನು ರೂಪಿಸಿ, ಪ್ರತ್ಯೊಂದು ಜಿಲ್ಲಾ ಮಟ್ಟದಲ್ಲಿ 6 ಪ್ರಶಸ್ತಿಗಳನ್ನು, ಇಲಾಖಾವಾರು 30 ಪ್ರಶಸ್ತಿಗಳನ್ನು ಹಾಗೂ ರಾಜ್ಯ ಮಟ್ಟದಲ್ಲಿ 3 ಪ್ರಶಸ್ತಿಗಳನ್ನು ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಿದೆ.

ಮೇಲೆ ಓದಲಾದ (2)ರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿಯವರು ದಿನಾಂಕ : 28–03–2013ರ ಅನಧಿಕೃತ ಟಿಪ್ಪಣಿಯಲ್ಲಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ **ಶ್ರೀ ಟಿ. ಕೆ. ರಮೇಶ್ ಪಂಚಾಯತ್ ಅಭಿವೃದ್ಧಿ ಅಧಿಕಾರಿ,** ಗ್ರಾಮ ಪಂಚಾಯತಿ, ಬಾಶೆಟ್ಟಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆರವರನ್ನು ಇಲಾಖೆಯ **ಸರ್ವೋತ್ತಮ ಸೇವಾ ಪ್ರಶಸ್ತಿಗೆ** ಆಯ್ಕೆ ಮಾಡಿರುವುದಕ್ಕಾಗಿ ತಿಳಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ಕೋರಿದ್ದಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಮೇಲೆ ಓದಲಾದ (1) ದಿನಾಂಕ : 20–11–2012ರ ಆದೇಶದನ್ವಯ, ಇಲಾಖಾ ಸಚಿವರಿಂದ ಪ್ರಶಸ್ತಿ ವಿತರಿಸಲು ಪ್ರಶಸ್ತಿ ಮೊತ್ತವನ್ನು ಕಳುಹಿಸಬೇಕಾಗಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 105 ಇಆಸು 2011, ಬೆಂಗಳೂರು, ದಿನಾಂಕ : 29–04–2013**

ರಾಜ್ಯ ಸರ್ಕಾರವು 2013ನೇ ಸಾಲಿನಲ್ಲಿ **ಶ್ರೀ ಟಿ.ಕೆ. ರಮೇಶ್, ಪಂಚಾಯತ್ ಅಭಿವೃದ್ಧಿ ಅಧಿಕಾರಿ,** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬಾಶೆಟ್ಟಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗೆ ಇಲಾಖಾ ಮಟ್ಟದ ಸರ್ವೋತ್ತಮ ಸೇವಾ ಪ್ರಶಸ್ತಿ ಹಾಗೂ ಪ್ರೋತ್ಸಾಹ ಧನವಾದ ರೂ. 15,000–00 (ರೂಪಾಯಿ ಹದಿನೈದು ಸಾವಿರ ಮಾತ್ರ) ನೀಡಲು ಮಂಜೂರಾತಿ ನೀಡಿದೆ.

ಈ ಪ್ರಶಸ್ತಿಯು ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 105 ಇಆಸು 2011 ದಿನಾಂಕ : 20–11–2012ರಲ್ಲಿ ಹೊರಡಿಸಲಾಗಿರುವ ಮಾರ್ಗಸೂಚಿಯ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಈ ಪ್ರಶಸ್ತಿ ನೀಡಲು ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2052–00–090–0–25–059 (ಯೋಜನೇತರ)–ಆಡಳಿತ ಸುಧಾರಣೆ ಸವಾಲು ನಿಧಿ ಇತರೆ ಖರ್ಚುಗಳು ಅಡಿಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಾ॥ ಗೀತಾ ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಆಡಳಿತ ಸುಧಾರಣೆ (ತರಬೇತಿ)

P.R. 783
SC - 100

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಡಿಪಿಎಆರ್ 36 ಹೆಚ್‌ಎಂಬಿ 2013, ಬೆಂಗಳೂರು, ದಿನಾಂಕ : 06–06–2013**

**ವಿಷಯ :** ಶ್ರೀ ಸಿ. ಜಿ. ಸುಪ್ರಸನ್ನ, ಉಪ ನಿವಾಸಿ ಆಯುಕ್ತರು, ಕರ್ನಾಟಕ ಭವನ ಇವರ ಹುದ್ದೆಯನ್ನು ಜಂಟಿ ನಿವಾಸಿ ಆಯುಕ್ತರು, ಕರ್ನಾಟಕ ಭವನ ಎಂದು ಮರು ಪದನಾಮೀಕರಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 102 ಹೆಚ್‌ಎಂಬಿ 2012, ದಿನಾಂಕ : 26–03–2013

2. ನವದೆಹಲಿಯ ಕರ್ನಾಟಕ ಭವನದ ನಿವಾಸಿ ಆಯುಕ್ತರ ಪತ್ರ ಸಂಖ್ಯೆ : ಆರ್‌ಸಿಕೆ/13/ಎಸ್‌ಇಎಸ್:2013, ದಿನಾಂಕ : 21–05–2013

ಉಲ್ಲೇಖ (1)ರ ಅಧಿಸೂಚನೆಯಲ್ಲಿ ಶ್ರೀ ಸಿ. ಜಿ. ಸುಪ್ರಸನ್ನ ಕೆ. ಎಂ.ಎ.ಎಸ್. ಜಂಟಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರನ್ನು ನವದೆಹಲಿಯ ಕರ್ನಾಟಕ ಭವನದ ಉಪ ನಿವಾಸಿ ಆಯುಕ್ತರ ಹುದ್ದೆಗೆ ನೇಮಕ ಮಾಡಲಾಗಿರುತ್ತದೆ.

ಉಲ್ಲೇಖ (2)ರ ಪತ್ರದಲ್ಲಿ ನವದೆಹಲಿಯ ಕರ್ನಾಟಕ ಭವನದ ನಿವಾಸಿ ಆಯುಕ್ತರು, ಶ್ರೀ ಸಿ. ಜಿ. ಸುಪ್ರಸನ್ನ ಇವರ ವೇತನ ಶ್ರೇಣಿಯು ಕರ್ನಾಟಕ ಭವನದ ಉಪ ನಿವಾಸಿ ಆಯುಕ್ತರ ವೇತನ ಶ್ರೇಣಿಗಿಂತ ಹೆಚ್ಚಾಗಿರುವುದರಿಂದ ಇವರ ಹುದ್ದೆಯನ್ನು ಉಪ ನಿವಾಸಿ ಆಯುಕ್ತರು, ಕರ್ನಾಟಕ ಭವನ ಎಂಬುದರ ಬದಲಾಗಿ ಜಂಟಿ ನಿವಾಸಿ ಆಯುಕ್ತರು, ಕರ್ನಾಟಕ ಭವನ ಎಂದು ಮರು ಪದನಾಮೀಕರಿಸುವಂತೆ ಕೋರಿರುತ್ತಾರೆ.

ಶ್ರೀ ಸಿ. ಜಿ. ಸುಪ್ರಸನ್ನ, ಉಪ ನಿವಾಸಿ ಆಯುಕ್ತರು, ಕರ್ನಾಟಕ ಭವನ ಇವರನ್ನು ಕರ್ನಾಟಕ ಭವನದಲ್ಲಿ ಕರ್ತವ್ಯ ನಿರ್ವಹಿಸುವ ಅವಧಿಯವರೆಗೆ ಇವರನ್ನು ಜಂಟಿ ನಿವಾಸಿ ಆಯುಕ್ತರು ಕರ್ನಾಟಕ ಭವನ ಎಂದು ಮರು ಪದನಾಮೀಕರಿಸಿ ಅವರ ಸ್ವಂತ ವೇತನ ಶ್ರೇಣಿಯ ಮೇಲೆ ಮುಂದುವರಿಯಲು ಈ ಮೂಲಕ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪದ್ಮರಾಜು,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ–1)

**P.R. 784**

## ಕಾರ್ಮಿಕ ಸಚಿವಾಲಯ

**ವಿಷಯ :** ಡಾ॥ ಬಿ. ವಿ. ಮಧುಸೂದನ್, ವಿಮಾ ವೈದ್ಯಾಧಿಕಾರಿ, ಕಾ.ರಾ.ವಿ. ಚಿಕಿತ್ಸಾಲಯ, ನೆಲಮಂಗಲ, ಬೆಂಗಳೂರು ಇವರು ಅನಧಿಕೃತ ಗೈರು ಹಾಜರಾಗಿರುವುದರಿಂದ ಸೇವೆಯಿಂದ ವಜಾಗೊಳಿಸುವ ಕುರಿತು.

**ಓದಲಾಗಿದೆ :**
1. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ:ಇಎಸ್‌ಐಎಸ್/ ಇವಿ/17/2008–09, ದಿನಾಂಕ : 20/23–03–2009, ದಿನಾಂಕ : 24–10–2009/11–11–2009, ದಿ: 15–03–2010/23–03–2010, ದಿ: 08–09–2011, ದಿ: 16–03–2013, 02–05–2013.
2. ಕಾರಣ ಕೇಳುವ ನೋಟೀಸಿನ ಸಂಖ್ಯೆ ಕಾಇ 136 ಎಲ್‌ಎಸ್‌ಐ 2009, ದಿನಾಂಕ : 20–01–2010.
3. ಸರ್ಕಾರದ ಆದೇಶ ಸಂಖ್ಯೆ: ಕಾಇ 136 ಎಲ್‌ಎಸ್‌ಐ 2009, ದಿ: 26–06–2010, 24–08–2011, 11–11–2011.
4. ಶ್ರೀ ಕೆ. ಎನ್. ನಾಗೇಂದ್ರಕುಮಾರ್, ವಿಚಾರಣಾಧಿಕಾರಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರ ಇಲಾಖಾ ವಿಚಾರಣಾ ವರದಿ ದಿ : 18–10–2012.
5. 2ನೇ ಕಾರಣ ಕೇಳುವ ನೋಟೀಸ್ ದಿನಾಂಕ : 07–11–2012.
6. ಡಾ: ಬಿ. ವಿ. ಮಧುಸೂದನ್ ರವರ ರಕ್ಷಣಾ ಹೇಳಿಕೆ ದಿನಾಂಕ : 02–01–2013.

**ಪ್ರಸ್ತಾವನೆ :**

ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ರವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 20/23–03–2009ರ ಪತ್ರದಲ್ಲಿ ಡಾ॥ ಬಿ. ವಿ. ಮಧುಸೂದನ್, ವಿಮಾ ವೈದ್ಯಾಧಿಕಾರಿ, ಕಾ.ರಾ.ವಿ. ಚಿಕಿತ್ಸಾಲಯ, ನೆಲಮಂಗಲ ಇವರನ್ನು ದಿನಾಂಕ: 26–03–2008ರಲ್ಲಿ ಕಾ.ರಾ.ವಿ. ಚಿಕಿತ್ಸಾಲಯ, ತುಮಕೂರು ಇಲ್ಲಿಗೆ ನಿಯೋಜಿಸಲಾಗಿತ್ತೆಂದು, ನಿಯೋಜನೆ ಮಾಡಿದ ಸ್ಥಳಕ್ಕೆ ಹಾಜರಾಗದೇ ದಿನಾಂಕ: 02–04–2008 ರಿಂದ 30–06–2008ರವರೆಗೆ 90 ದಿನಗಳ ಪರಿವರ್ತಿತ ರಜೆಯನ್ನು ವೈದ್ಯಕೀಯ ಆದಾರದ ಮೇಲೆ ಮಂಜೂರು ಮಾಡಲು ಕೋರಿರುತ್ತಾರೆಂದು ತಿಳಿಸಿದ್ದರೆ. ನಿಯೋಜಿಸಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗುವಂತೆಯೂ ತಪ್ಪಿದಲ್ಲಿ ಶಿಸ್ತು ಕ್ರಮ ಜರುಗಿಸಲಾಗುವುದೆಂದು ವೈದ್ಯರ ಮನೆಯ ವಿಳಾಸಕ್ಕೆ ದಿನಾಂಕ : 11–04–2008ರ ಜ್ಞಾಪನಾ ಪತ್ರವನ್ನು ಕಳುಹಿಸಲಾಗಿತ್ತೆಂದು, ಆದರೆ ವೈದ್ಯರು ಸೇವಾ ವರದಿ ಮಾಡಿಕೊಳ್ಳದೆ ಪುನಹ ರಜೆಯ ಅರ್ಜಿಯನ್ನು ಸಲ್ಲಿಸಿ ದಿನಾಂಕ 29–09–2008 ರಿಂದ 25–01–2009ವರೆಗೆ ಅಸಾಧಾರಣ ರಜೆಯನ್ನು ಮಂಜೂರು ಮಾಡಬೇಕೆಂದು ಕೋರಿರುವ ಇವರ ರಜಾ ಅರ್ಜಿಯನ್ನು ರದ್ದುಪಡಿಸಲಾಗಿದೆಯೆಂದು ತಿಳಿಸಿ, ಸದರಿ ವೈದ್ಯರು 04 ತಿಂಗಳಿಗೂ ಮೇಲ್ಪಟ್ಟು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗುವುದರ ಮೂಲಕ ಸರ್ಕಾರಿ ಸೇವೆಯಲ್ಲಿ ಬೇಜವಾಬ್ದಾರಿತನದಿಂದ ವರ್ತಿಸಿದ್ದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿ ಸದರಿಯವರ ವಿರುದ್ಧ ಶಿಸ್ತು ಕ್ರಮವನ್ನು ಕೈಗೊಳ್ಳಬಹುದಾಗಿದೆಯೆಂದು ವರದಿ ಮಾಡಿದ್ದಾರೆ.

ನಿರ್ದೇಶಕರು, ಕಾ.ರಾ.ವಿ.ರವರು ಮೇಲೆ ಓದಲಾದ (1)ರ ದಿನಾಂಕ: 24–10–2009/11–11–2009ರ ಸರ್ಕಾರದ ಪತ್ರದಲ್ಲಿ, ದಿನಾಂಕ: 13–04–2009ರ ಪತ್ರದನುಸಾರ ಡಾ॥ ಬಿ. ವಿ. ಮಧುಸೂದನ್‌ರವರ ವೈದ್ಯಕೀಯ ರಜೆ ಮಂಜೂರಾತಿ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕರನ್ನು ಕೋರಲಾಗಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ನಿರ್ದೇಶಕರು ಪ್ರಕರಣವನ್ನು ಬೌರಿಂಗ್ ಮತ್ತು ಲೇಡಿ ಕರ್ಝನ್ ಆಸ್ಪತ್ರೆಯ ವೈದ್ಯಕೀಯ ಮಂಡಳಿಗೆ ನಿರ್ದೇಶಿಸಿದ ನಂತರ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗುವಂತೆ ಡಾ॥ ಬಿ. ವಿ. ಮಧುಸೂದನ್ ರವರಿಗೆ 3 ಭಾರಿ ಅವಕಾಶ ನೀಡಿದ್ದಾಗಿಯೂ ಹಾಜರಾಗಲಿಲ್ಲವೆಂದು ವೈದ್ಯಕೀಯ ಮಂಡಳಿಯ ಅಧ್ಯಕ್ಷರ ದಿನಾಂಕ : 01–10–2009ರ ಪತ್ರವನ್ನು ಉಲ್ಲೇಖಿಸಿ ವರದಿ ಮಾಡಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ : 20–01–2010ರ ಕಾರಣ ಕೇಳುವ ನೋಟೀಸಿನಲ್ಲಿ ಡಾ॥ ಬಿ. ಬಿ. ಮಧುಸೂದನ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಪ್ರಕಾರ ಶಿಸ್ತಿನ ಕ್ರಮ ಜರುಗಿಸಲು ಉದ್ದೇಶಿಸಿ, ಕ್ರಮ ಜರುಗಿಸಲು ಕಾರಣವಾದ ಆರೋಪಗಳನ್ನು ದುರ್ನಡತೆಯ ವಿವರಗಳನ್ನು ಆರೋಪಿಗಳನ್ನು ಸಾಬೀತುಪಡಿಸಬಲ್ಲ ದಾಖಲೆಗಳ ಪಟ್ಟಿಯನ್ನು ಹಾಗೂ ಸಾಕ್ಷಿಗಳ ಪಟ್ಟಿಯನ್ನು ಅನುಬಂಧ–1,2,3, ಮತ್ತು 4 ರೊಂದಿಗೆ ಹೊರಡಿಸಿ 15 ದಿನಗಳೊಳಗೆ ಆರೋಪಗಳ ಬಗ್ಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಅವಕಾಶ ನೀಡಲಾಗಿತ್ತು.

ನಿರ್ದೇಶಕರು ಕಾ.ರಾ.ವಿ. ರವರ ಮೇಲೆ ಓದಲಾದ (1)ರ ದಿನಾಂಕ : 15–03–2010/23–03–2010ರ ಪತ್ರದಲ್ಲಿ ಆರೋಪಿತ ವೈದ್ಯರು ಇದುವರೆವಿಗೂ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುದಿಲ್ಲವೆಂದು ರಕ್ಷಣಾ ಹೇಳಿಕೆ ಸಲ್ಲಿಸಲು ನೀಡಲಾಗಿದ್ದ ಗಡುವು ಮುಗಿದು ಹೋಗಿರುವುದರಿಂದ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವಾಗಿರುತ್ತದೆಯೆಂದು ವರದಿ ಮಾಡಿರುತ್ತಾರೆ.

ಮೇಲೆ ಓದಲಾದ (3)ರ ಸರ್ಕಾರದ ಆದೇಶ ದಿನಾಂಕ : 26–06–2010ರಲ್ಲಿ ಡಾ॥ ಬಿ. ವಿ. ಮಧುಸೂದನ್‌ರವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ಶ್ರೀ ಹೆಚ್. ಆರ್. ಸುಧೀರ್ ರವರು ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಗಳನ್ನು

ನೇಮಿಸಲಾಗಿತ್ತು. ಶ್ರೀ ಹೆಚ್.ಆರ್. ಸುಧೀರ್ ರವರು ವಿಚಾರಣಾ ಪ್ರಕ್ರಿಯೆಯನ್ನು ಕೈಗೊಳ್ಳದಿದ್ದ ಕಾರಣ ದಿನಾಂಕ : 24-08-2011ರಲ್ಲಿ ಡಾ॥ ಶ್ರೀದೇವಿ, ಉಪ ನಿರ್ದೇಶಕರು (ಆಡಳಿತ) ಕಾ.ರಾ.ವಿ.ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಯಿತು.

ದೋಷಾರೋಪಣೆಯನ್ನು ಸಮರ್ಥಿಸಲು ನುಡಿಯುವ ಸಾಕ್ಷಿಗಳಲ್ಲಿ ಡಾ॥ ಶ್ರೀದೇವಿ, ಉಪ ನಿರ್ದೇಶಕರು (ಆಡಳಿತ) ಕಾರಾವಿ ರವರು ಒಬ್ಬರಾಗಿರುವುದರಿಂದ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡುವುದಕ್ಕೆ ನಿಯಮಾನುಸಾರ ಅವಕಾಶವಿರುವುದಿಲ್ಲವಾದ್ದರಿಂದ ಶ್ರೀ ಕೆ. ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕ ಮಾಡಬಹುದೆಂದು ಇಲಾಖಾ ನಿರ್ದೇಶಕರು ಮೇಲೆ ಓದಲಾದ (1)ರ ದಿನಾಂಕ : 08-09-2011ರ ಪತ್ರದಲ್ಲಿ ವರದಿ ಮಾಡಿರುತ್ತಾರೆ. ಅದರಂತೆ ಮೇಲೆ ಓದಲಾದ (3)ರ ಸರ್ಕಾರದ ಆದೇಶ ದಿನಾಂಕ : 11-11-2011ರಲ್ಲಿ ಶ್ರೀ ಕೆ. ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಮೇಲೆ ಓದಲಾದ (4)ರ ದಿನಾಂಕ : 18-10-2012ರಲ್ಲಿ ಶ್ರೀ ಕೆ. ಎನ್. ನಾಗೇಂದ್ರಕುಮಾರ್, ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾ ವರದಿಯ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬ ಬಗ್ಗೆ ಅಹವಾಲನ್ನು 15 ದಿನಗಳೊಳಗೆ ಸಲ್ಲಿಸುವಂತೆ 2ನೇ ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ (5)ರ ದಿನಾಂಕ : 07-11-2012ರಂದು ಜಾರಿಗೊಳಿಸಲಾಯಿತು. ಡಾ॥ ಬಿ. ವಿ. ಮಧುಸೂದನ ರವರು ತಮ್ಮ ಮೇಲೆ ಹೊರಿಸಿರುವ ಆರೋಪಗಳು ನಿರಾಧಾರವಾಗಿದೆಯೆಂದು ತಮ್ಮನ್ನು ಆರೋಪದಿಂದ ಮುಕ್ತಗೊಳಿಸಿ ದಿನಾಂಕ : 19-07-2010ರಂದು ಸಲ್ಲಿಸಿರುವ ರಾಜೀನಾಮೆಯನ್ನು ಅಂಗೀಕರಿಸುವಂತೆ ಮೇಲೆ ಓದಲಾದ (6)ರ ದಿನಾಂಕ : 02-01-2013ರಲ್ಲಿ ರಕ್ಷಣಾ ಹೇಳಿಕೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಾಇ 117 ಎಲ್ಎಸ್ಐ 2013, ಬೆಂಗಳೂರು, ದಿನಾಂಕ : 20-07-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಬಿ. ವಿ. ಮಧುಸೂದನ, ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ ನೆಲಮಂಗಲ ಇವರು ದಿನಾಂಕ : 02-04-2008 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಾದ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3 (iii) ರ ಪ್ರಕಾರ ಸರ್ಕಾರಿ ನೌಕರರನಿಗೆ ತಕ್ಕುದಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (viii)ರಡಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲಾಗಿದೆ. ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ಸಂಖ್ಯೆ ಸಿಆಸುಇ 18 ಸೇಇವಿ 2001, ದಿನಾಂಕ: 14-09-2001ರ ಕ್ರಮ ಸಂಖ್ಯೆ 2ರ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ, (ಕಾರಾವಿ ಯೋ (ವೈ) ಸೇವೆಗಳು)

**P.R. 785**
**SC - 25**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ರಾಯಬಾಗ್ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಪತ್ರ ಸಂಖ್ಯೆ : ಲಾ 124 ಎಲ್ ಸಿ ಎಲ್ 2012, ದಿನಾಂಕ : 04-10-2012.
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಜಿಲ್ಲೆ ರವರ ದಿನಾಂಕ : 26-11-2012 ಪತ್ರ.
3. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಳಗಾವಿ ಜಿಲ್ಲೆರವರ ದಿನಾಂಕ : 21-01-2013ರ ಪತ್ರ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 04-10-2012ರ ಪತ್ರದಲ್ಲಿ ರಾಯಬಾಗ್ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಇರುವ 3 ನೋಟರಿಗಳಿಗೆ (ಕೇಂದ್ರ ಸರ್ಕಾರದ 2 ನೋಟರಿಗಳು ಹಾಗೂ ರಾಜ್ಯ ಸರ್ಕಾರದ ಒಬ್ಬರು ನೋಟರಿಯವರು) ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಹಿರಿಯ ದಿವಾಣಿ ನ್ಯಾಯಾಧೀಶರು ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ರಾಯಬಾಗ್ ಇವರು ಕೇಂದ್ರ ಸರ್ಕಾರದಿಂದ ನೇಮಕಗೊಂಡ 2 ನೋಟರಿಗಳು ಹಾಗೂ ರಾಜ್ಯ ಸರ್ಕಾರದಿಂದ ನೇಮಕಗೊಂಡ ಒಬ್ಬ ನೋಟರಿಗೆ ಹೆಚ್ಚಿನ ಕೆಲಸದ ಒತ್ತಡವಿದ್ದು ರಾಯಭಾಗ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ತಿಳಿಸಿರುವ ವರದಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ : 26-11-2012ರ ಪತ್ರದೊಂದಿಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಜಿಲ್ಲೆ ಇವರು ಲಗತ್ತಿಸಿ ಸಲ್ಲಿಸುತ್ತಾ. ಈ ಎಲ್ಲಾ ಅಂಶವನ್ನು ಅವಲೋಕಿಸಿದಾಗ ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆಯೆಂದು ಅಭಿಪ್ರಾಯ ನೀಡಿದ್ದಾರೆ.

ಅದರಂತೆ, ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ : 21-01-2013ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಳಗಾವಿ ಜಿಲ್ಲೆ ಇವರನ್ನು ವಿಷಯದ ಬಗ್ಗೆ ಪರಿಶೀಲಿಸಿ ಮುಂದಿನ ಕ್ರಮ ಜರುಗಿಸಲು ಕೋರಿರುವುದಾಗಿ ತಿಳಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 124 ಎಲ್ ಸಿ ಎಲ್ 2012, ಬೆಂಗಳೂರು, ದಿನಾಂಕ : 01-07-2013**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಬೆಳಗಾವಿ ಜಿಲ್ಲೆಯ ರಾಯಬಾಗ್ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೆ. ಲಕ್ಷ್ಮೀನರಸಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2) (ಪ್ರಭಾರ),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**P.R. 786**
**SC - 25**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖಾ ಪುನರ್ ರಚನೆ– ಪಶುಚಿಕಿತ್ಸಾಲಯಗಳನ್ನು ಪಶು ಆಸ್ಪತ್ರೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ; ಪಸಂಮೀ 56 ಪಸಸೇ 2011, ದಿನಾಂಕ: 29–12–2012.

2) ಸಂಖ್ಯೆ: ಆಪಸಂ/ಸಿಬ್ಬಂದಿ–1/ವಿವ/ಪಇಪು/2010–11, ದಿನಾಂಕ: 21–02–2013

3) ಸಂಖ್ಯೆ:ಆಪಸಂ/ಸಿಬ್ಬಂದಿ–ಅ/ವಿವ/ಪಇಪು/2005–06/2011–12, ದಿನಾಂಕ: 18–03–2013 ಮತ್ತು 18–04–2013

**ಪ್ರಸ್ತಾವನೆ:–**

ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಪುನರ್ ರಚನೆ ಕುರಿತು ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ 327 ಪಶುಚಿಕಿತ್ಸಾಲಯಗಳನ್ನು ಪಶು ಆಸ್ಪತ್ರೆಗಳಾಗಿ ಮೇಲ್ದರ್ಜೆಗೇರಿಸಲು, ಜಿಲ್ಲಾ ಮಟ್ಟದ ಆಸ್ಪತ್ರೆಗಳನ್ನು ಪಾಲಿಕ್ಲಿನಿಕ್‌ಗಳಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದೆ. ಆಯುಕ್ತರು, ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರಿಗೆ ಮೇಲ್ದರ್ಜೆಗೇರಿಸುವ ಪಶುಚಿಕಿತ್ಸಾಲಯಗಳು ಹಾಗೂ ಆಸ್ಪತ್ರೆಗಳನ್ನು ಗುರುತಿಸಿ ಸರ್ಕಾರಕ್ಕೆ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (2) ಮತ್ತು (3) ರಲ್ಲಿ ಓದಲಾದ ಪತ್ರಗಳಲ್ಲಿ ವರದಿ ಮಾಡುತ್ತಾ ಇಲಾಖಾ ಪುನರ್ ರಚನೆ ಆದೇಶದನ್ವಯ 327 ಪಶುಚಿಕಿತ್ಸಾಲಯಗಳನ್ನು ಪಶು ಆಸ್ಪತ್ರೆಗಳಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಿ, ಅಂತಹ 327 ಪಶುಚಿಕಿತ್ಸಾಲಯಗಳ ಪಟ್ಟಿಯನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸಿ, ಸದರಿ ಪಶುಚಿಕಿತ್ಸಾಲಯಗಳಲ್ಲಿ ಪಶುವೈದ್ಯಾಧಿಕಾರಿಗಳ ಹುದ್ದೆಗಳು ರದ್ದುಗೊಂಡು ಹಿರಿಯ/ಮುಖ್ಯ ಪಶುವೈದ್ಯಾಧಿಕಾರಿಗಳ ಹುದ್ದೆಗಳಾಗಿ ಮೇಲ್ದರ್ಜೆಗೇರುತ್ತವೆಂದು ಹಾಗೂ ಹಿರಿಯ ಪಶುವೈದ್ಯಕೀಯ ಪರೀಕ್ಷಕರರ ಹುದ್ದೆಗಳು ಜಾನುವಾರು ಅಧಿಕಾರಿಗಳ ಹುದ್ದೆಗಳಾಗಿ ಮೇಲ್ದರ್ಜೆಗೇರುತ್ತದೆಂದು ತಿಳಿಸಿರುತ್ತಾರೆ. ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಪಶು ಆಸ್ಪತ್ರೆಗಳಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಿರುವ ಪಟ್ಟಿಯಲ್ಲಿ 319 ಕೇಂದ್ರಗಳು ಹೋಬಳಿ ಕೇಂದ್ರಗಳಲ್ಲಿನ ಪಶು ಚಿಕಿತ್ಸಾಲಯಗಳಾಗಿದ್ದು, 8 ಹೋಬಳಿ ಕೇಂದ್ರಗಳಲ್ಲಿ ಪಶು ಚಿಕಿತ್ಸಾಲಯಗಳಿಲ್ಲದ ಕಾರಣ ಸಮೀಪದ ಹಾಗೂ ಹಳೆಯ ಪಶು ಚಿಕಿತ್ಸಾಲಯಗಳನ್ನು ಮೇಲ್ದರ್ಜೆಗೇರಿಸಲು ಸ್ಥಳಗಳನ್ನು ಗುರುತಿಸಲಾಗಿದೆ. ಇಲಾಖೆಯಲ್ಲಿ ಜಿಲ್ಲಾ ಮಟ್ಟದಲ್ಲಿ ಉಪ ನಿರ್ದೇಶಕರ ಹುದ್ದೆಯಿದ್ದು ತಾಲ್ಲೂಕು ಮಟ್ಟದ ಪಶು ಆಸ್ಪತ್ರೆಗಳಲ್ಲಿ ಸಹಾಯಕ ನಿರ್ದೇಶಕರ ಹುದ್ದೆ ಇರುತ್ತದೆಂದು, ತದನಂತರದ ಹಂತವು ಹೋಬಳಿ ಹಂತವಾಗಿದ್ದು, ಪ್ರಸ್ತುತ ಹೋಬಳಿ ಹಂತದಲ್ಲಿ 300 ಪಶು ಆಸ್ಪತ್ರೆಗಳು ಮಂಜೂರಾಗಿದ್ದು, ಈ ಸಂಸ್ಥೆಗಳಲ್ಲಿ ಸಹಾಯಕ ನಿರ್ದೇಶಕರು ಕರ್ತವ್ಯ ನಿರ್ವಹಿಸುತ್ತಿದ್ದಾರೆಂದು ತಿಳಿಸಿರುತ್ತಾರೆ. ಹೋಬಳಿ ಹಂತದಲ್ಲಿ ಪಶುಚಿಕಿತ್ಸಾಲಯಗಳನ್ನು ಪ್ರಾರಂಭಿಸುವಾಗ ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸಿನಂತೆ 5000 ಜಾನುವಾರು ಘಟಕ ಇರುವ ಹಾಗೂ ಮೂಲಭೂತ ಸೌಕರ್ಯಗಳಿರುವ ಇರುವ ಹಾಗೂ ಮೂಲಭೂತ ಸೌಕರ್ಯಗಳಿರುವ ಪ್ರಸ್ತಾಪಿತ 327 ಪಶುಚಿಕಿತ್ಸಾಲಯಗಳನ್ನು ಪಶು ಆಸ್ಪತ್ರೆಗಳನ್ನಾಗಿ ಮೇಲ್ದರ್ಜೆಗೇರಿಸಲು ಆಯುಕ್ತರು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಹಾಲಿ 300 ಹೋಬಳಿ ಕೇಂದ್ರಗಳಲ್ಲಿ ಪಶು ಆಸ್ಪತ್ರೆಗಳಿದ್ದು, ಪ್ರಸ್ತಾವನೆಯ ಅನುಬಂಧದಲ್ಲಿರುವ 319 ಹೋಬಳಿ ಕೇಂದ್ರಗಳ ಹಾಗೂ ಇತರ 8 ಕೇಂದ್ರಗಳ ಒಟ್ಟು 327 ಪಶುಚಿಕಿತ್ಸಾಲಯಗಳನ್ನು ಪಶು ಆಸ್ಪತ್ರೆಗಳಾಗಿ (ಪುನರ್ ರಚನೆ ಆದೇಶದಂತೆ) ಮೇಲ್ದರ್ಜೆಗೇರಿಸಲು ತೀರ್ಮಾನಿಸಿದ್ದು, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 16 ಪಸಸೇ 2013, ಬೆಂಗಳೂರು, ದಿನಾಂಕ: 22 ನೇ ಜುಲೈ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಹೋಬಳಿ ಕೇಂದ್ರಗಳ ಹಾಗೂ ಇತರೆ ಕೇಂದ್ರಗಳಲ್ಲಿರುವ ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವ 327 ಪಶುಚಿಕಿತ್ಸಾಲಯಗಳನ್ನು ಪಶು ಆಸ್ಪತ್ರೆಗಳನ್ನಾಗಿ ಮೇಲ್ದರ್ಜೆಗೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಪ್ರಸನ್ನ**

ಪೀಠಾಧಿಕಾರಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 16 ಪಅಸೇ 2013 ದಿನಾಂಕ: 22.07.2013 ಕ್ಕೆ ಅನುಬಂಧ**

**VETERINARY DISPENSARIES UPGRADADED AS VETERINARY HOSPITALS**

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 1 | Bangalore Urban | Anekal | Jigani | Veterinary Dispensary, | Jigani |
| 2 | Bangalore Urban | Bangalore North | Hesaraghatta | Veterinary Dispensary, | Hesaraghatta |
| 3 | Bangalore Urban | Bangalore North | Jala | Veterinary Dispensary, | Chikkajala |
| 4 | Bangalore Urban | Bangalore South | Begur | Veterinary Dispensary, | Begur |
| 5 | Bangalore Urban | Bangalore South | Thavarekere | Veterinary Dispensary, | Thavarekere |
| 6 | Bangalore Rural | Doddaballapur | Sasalu | Veterinary Dispensary, | Sasalu |
| 7 | Bangalore Rural | Doddaballapur | Thubagere | Veterinary Dispensary, | Thubagere |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 8 | Bangalore Rural | Hosakote | Jadigenahalli | Veterinary Dispensary, | Jadigenahalli |
| 9 | Bangalore Rural | Hosakote | Sulibele | Veterinary Dispensary, | Sulibele |
| 10 | Bangalore Rural | Nelamangala | Sompura | Veterinary Dispensary, | Sompura (Dabaspet) |
| 11 | Bangalore Rural | Nelamangala | Thyamagondlu | Veterinary Dispensary, | Thyamagondlu |
| 12 | Bagalkote | Badami | Kulageri | Veterinary Dispensary, | Kulageri |
| 13 | Bagalkote | Bagalkote | Kaladagi | Veterinary Dispensary, | Kaladagi |
| 14 | Bagalkote | Hungund | Aminagad | Veterinary Dispensary, | Aminagad |
| 15 | Bagalkote | Hungund | Karadi | Veterinary Dispensary, | Karadi |
| 16 | Bagalkote | Jamakhandi | Savalgi | Veterinary Dispensary, | Savalgi |
| 17 | Bagalkote | Mudhol | Lokapur | Veterinary Dispensary, | Lokapur |
| 18 | Belgaum | Athani | Ananthapur | Veterinary Dispensary, | Ananthapur |
| 19 | Belgaum | Athani | Kagwad | Veterinary Dispensary, | Kagwad |
| 20 | Belgaum | Athani | Telsang | Veterinary Dispensary, | Telsang |
| 21 | Belgaum | Bailhongal | Kittur | Veterinary Dispensary, | Kittur |
| 22 | Belgaum | Bailhongal | Nesargi | Veterinary Dispensary, | Nesargi |
| 23 | Belgaum | Belgaum | Kakathi | Veterinary Dispensary, | Kakathi |
| 24 | Belgaum | Belgaum | Uchagaon | Veterinary Dispensary, | Uchagaon |
| 25 | Belgaum | Chikkodi | Nagaramunoli | Veterinary Dispensary, | Nagaramunoli |
| 26 | Belgaum | Gokak | Arabhavi | Veterinary Dispensary, | Arabhavi |
| 27 | Belgaum | Gokak | Koujalagi | Veterinary Dispensary, | Koujalagi |
| 28 | Belgaum | Hukkeri | Yamakanmardi | Veterinary Dispensary, | Yamakanmardi |
| 29 | Belgaum | Khanapur | Gunji | Veterinary Dispensary, | Gunji |
| 30 | Belgaum | Khanapur | Jamboti | Veterinary Dispensary, | Jamboti |
| 31 | Belgaum | Raibagh | Kudachi | Veterinary Dispensary, | Kudachi |
| 32 | Belgaum | Ramadurg | Katakol | Veterinary Dispensary, | Katakol |
| 33 | Belgaum | Ramadurg | Mudakavi | Veterinary Dispensary, | Mudakavi |
| 34 | Belgaum | Ramadurg | Sureban (Ramadurg) | Veterinary Dispensary, | Sureban (Ramadurg) |
| 35 | Belgaum | Soundatti | Munavalli | Veterinary Dispensary, | Munavalli |
| 36 | Belgaum | Soundatti | Murgod | Veterinary Dispensary, | Murgod |
| 37 | Belgaum | Soundatti | Yeragatti | Veterinary Dispensary, | Yeragatti |
| 38 | Bellary | Bellary | Moka | Veterinary Dispensary, | Moka |
| 39 | Bellary | Bellary | Rupanagudi | Veterinary Dispensary, | Rupanagudi |
| 40 | Bellary | Hadagali | Hirehadagali | Veterinary Dispensary, | Hirehadagali |
| 41 | Bellary | H.B. Halli | Hampasagara | Veterinary Dispensary, | Hampasagara |
| 42 | Bellary | H.B. Halli | Kogli | Veterinary Dispensary, | Kogli |
| 43 | Bellary | H.B. Halli | Thambrahalli | Veterinary Dispensary, | Thambrahalli |
| 44 | Bellary | Hospet | Kamalapur | Veterinary Dispensary, | Kamalapur |
| 45 | Bellary | Hospet | Kampli | Veterinary Dispensary, | Kampli |
| 46 | Bellary | Hospet | Mariyammanahalli | Veterinary Dispensary, | Mariyammanahalli |
| 47 | Bellary | Kudligi | Gudekote | Veterinary Dispensary, | Gudekote |
| 48 | Bellary | Kudligi | Hosahalli | Veterinary Dispensary, | Hosahalli |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 49 | Bellary | Sandur | Chornur | Veterinary Dispensary, | Chornur |
| 50 | Bellary | Sandur | Thoranagal | Veterinary Dispensary, | Thoranagal |
| 51 | Bellary | Siraguppa | Hatcholli | Veterinary Dispensary, | Hatcholli |
| 52 | Bellary | Siraguppa | Karur | Veterinary Dispensary, | Karur |
| 53 | Bidar | Aurad | Chintaki | Veterinary Dispensary, | Chintaki |
| 54 | Bidar | Aurad | Kamalanagar | Veterinary Dispensary, | Kamalanagar |
| 55 | Bidar | Aurad | Santhpur | Veterinary Dispensary, | Santhpur |
| 56 | Bidar | Aurad | T. Kushnoor | Veterinary Dispensary, | T. Kushnoor |
| 57 | Bidar | Basavakalyan | Kohinoor | Veterinary Dispensary, | Kohinoor |
| 58 | Bidar | Basavakalyan | Matala | Veterinary Dispensary, | Matala |
| 59 | Bidar | Basavakalyan | Mudabi | Veterinary Dispensary, | Mudabi |
| 60 | Bidar | Basavakalyan | Rajeshwar | Veterinary Dispensary, | Rajeshwar |
| 61 | Bidar | Bhalki | Halbarga | Veterinary Dispensary, | Halbarga |
| 62 | Bidar | Bhalki | K. Chincholi | Veterinary Dispensary, | K. Chincholi |
| 63 | Bidar | Bhalki | Lakhangaon | Veterinary Dispensary, | Lakhangaon |
| 64 | Bidar | Bhalki | Saigaon | Veterinary Dispensary, | Saigaon |
| 65 | Bidar | Bidar | Bagdala | Veterinary Dispensary, | Bagdala |
| 66 | Bidar | Bidar | Janawada | Veterinary Dispensary, | Janawada |
| 67 | Bidar | Bidar | Kamthana | Veterinary Dispensary, | Kamthana |
| 68 | Bidar | Bidar | Manahalli | Veterinary Dispensary, | Manahalli |
| 69 | Bidar | Humnabad | Bimalkhed | Veterinary Dispensary, | Bimalkhed |
| 70 | Bidar | Humnabad | Dubalgundi | Veterinary Dispensary, | Dubalgundi |
| 71 | Bidar | Humnabad | Hallikhed (B) | Veterinary Dispensary, | Hallikhed (B) |
| 72 | Bidar | Humnabad | Nirna | Veterinary Dispensary, | Nirna |
| 73 | Bijapur | Bagewadi | Huvina Hippargi | Veterinary Dispensary, | Huvina Hippargi |
| 74 | Bijapur | Bagewadi | Kolhar | Veterinary Dispensary, | Kolhar |
| 75 | Bijapur | Indi | Ballolli | Veterinary Dispensary, | Ballolli |
| 76 | Bijapur | Indi | Chadachan | Veterinary Dispensary, | Chadachan |
| 77 | Bijapur | Muddebihal | Dhavalgi | Veterinary Dispensary, | Dhavalgi |
| 78 | Bijapur | Muddebihal | Nalathwad | Veterinary Dispensary, | Nalathwad |
| 79 | Chamarajanagar | Gundlupet | Begur | Veterinary Dispensary, | Begur |
| 80 | Chamarajanagar | Gundlupet | Hangala | Veterinary Dispensary, | Hangala |
| 81 | Chamarajanagar | Kollegal | Lokkanahalli | Veterinary Dispensary, | Lokkanahalli |
| 82 | Chamarajanagar | Kollegal | Ramapura | Veterinary Dispensary, | Ramapura |
| 83 | Chamarajanagar | Yelandur | Agara | Veterinary Dispensary, | Agara |
| 84 | Chikkaballapura | Bagepalli | Gulur | Veterinary Dispensary, | Gulur |
| 85 | Chikkaballapura | Bagepalli | Mittemari | Veterinary Dispensary, | Mittemari |
| 86 | Chikkaballapura | Bagepalli | Pathapalya | Veterinary Dispensary, | Pathapalya |
| 87 | Chikkaballapura | Chikkaballapura | Mandikal | Veterinary Dispensary, | Mandikal |
| 88 | Chikkaballapura | Chikkaballapura | Nandi | Veterinary Dispensary, | Nandi |
| 89 | Chikkaballapura | Chintamani | Chilakalanerpu | Veterinary Dispensary, | Chilakalanerpu |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 90 | Chikkaballapura | Chintamani | Muragamalla | Veterinary Dispensary, | Muragamalla |
| 91 | Chikkaballapura | Gowribidanuru | D Palya | Veterinary Dispensary, | D Palya |
| 92 | Chikkaballapura | Gowribidanuru | Hosuru | Veterinary Dispensary, | Hosuru |
| 93 | Chikkaballapura | Gowribidanuru | Nagaragere | Veterinary Dispensary, | Nagaragere |
| 94 | Chikkaballapura | Gowribidanuru | Thondebavi | Veterinary Dispensary, | Thondebavi |
| 95 | Chikkaballapura | Gudibande | Somenahalli | Veterinary Dispensary, | Somenahalli |
| 96 | Chikkaballapura | Shidlaghatta | Bashettyhalli | Veterinary Dispensary, | Bashettyhalli |
| 97 | Chikkaballapura | Shidlaghatta | Jangamakote | Veterinary Dispensary, | Jangamakote |
| 98 | Chikkaballapura | Shidlaghatta | Sadali | Veterinary Dispensary, | Sadali |
| 99 | Chikmagalur | Kadur | Chowlahiriyur | Veterinary Dispensary, | Chowlahiriyur |
| 100 | Chikmagalur | Kadur | Singhatagere | Veterinary Dispensary, | Singhatagere |
| 101 | Chikmagalur | Koppa | Hariharapura | Veterinary Dispensary, | Hariharapura |
| 102 | Chikmagalur | Mudigere | Banakal | Veterinary Dispensary, | Banakal |
| 103 | Chikmagalur | Tarikere | Lakkavalli | Veterinary Dispensary, | Lakkavalli |
| 104 | Chikmagalur | Tarikere | Lingadhahalli | Veterinary Dispensary, | Lingadhahalli |
| 105 | Chikmagalur | Tarikere | Shivani | Veterinary Dispensary, | Shivani |
| 106 | Chitradurga | Challakere | Nayakanahatti | Veterinary Dispensary, | Nayakanahatti |
| 107 | Chitradurga | Challakere | Parashurampura | Veterinary Dispensary, | Parashurampura |
| 108 | Chitradurga | Challakere | Thalaku | Veterinary Dispensary, | Thalaku |
| 109 | Chitradurga | Chitradurga | Thuruvanuru | Veterinary Dispensary, | Thuruvanuru |
| 110 | Chitradurga | Hiriyur | Aimangala | Veterinary Dispensary, | Aimangala |
| 111 | Chitradurga | Hiriyur | J.G. Halli | Veterinary Dispensary, | J.G. Halli |
| 112 | Chitradurga | Holalkere | Ramagiri | Veterinary Dispensary, | Ramagiri |
| 113 | Chitradurga | Holalkere | Thalya | Veterinary Dispensary, | Thalya |
| 114 | Chitradurga | Hosadurga | Madadhakere | Veterinary Dispensary, | Madadhakere |
| 115 | Chitradurga | Hosadurga | Sriramapura | Veterinary Dispensary, | Sriramapura |
| 116 | Dakshina Kannada | Bantwala | Vitla | Veterinary Dispensary, | Mane (O. I) |
| 117 | Dakshina Kannada | Puthur | Panaje | Veterinary Dispensary, | Panaje (O.I) |
| 118 | Dakshina Kannada | Belthangadi | Venoor | Veterinary Dispensary, | Venoor (O. I) |
| 119 | Dakshina Kannada | Mangalore | Gurupura | Veterinary Dispensary, | Ganjimata (O. I) |
| 120 | Dakshina Kannada | Mangalore | Mangalore - B | Veterinary Dispensary, | Kotekar (O. I) |
| 121 | Dakshina Kannada | Puttur | Kadaba | Veterinary Dispensary, | Kadaba |
| 122 | Dakshina Kannada | Sulya | Panje | Veterinary Dispensary, | Panje (O. I) |
| 123 | Davanagere | Davanagere | Anagodu | Veterinary Dispensary, | Anagodu |
| 124 | Davanagere | Harihara | Malebennuru | Veterinary Dispensary, | Malebennuru |
| 125 | Davanagere | Harapanahalli | Arasikere | Veterinary Dispensary, | Arasikere |
| 126 | Davanagere | Harapanahalli | Chigateri | Veterinary Dispensary, | Chigateri |
| 127 | Davanagere | Harapanahalli | Telagi | Veterinary Dispensary, | Telagi |
| 128 | Davanagere | Honnali | Saswehalli -1 Circ | Veterinary Dispensary, | Saswehalli |
| 129 | Davanagere | Jagalur | Bilachodu | Veterinary Dispensary, | Bilachodu |
| 130 | Davanagere | Jagalur | Sokke | Veterinary Dispensary, | Sokke |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 131 | Dharwad | Dharwad | Amminabhavi | Veterinary Dispensary, | Amminabhavi |
| 132 | Dharwad | Kalghatgi | Dhummawad | Veterinary Dispensary, | Dhummawad |
| 133 | Dharwad | Kundagol | Saunshi | Veterinary Dispensary, | Saunshi |
| 134 | Dharwad | Navalgund | Morab | Veterinary Dispensary, | Morab |
| 135 | Gadag | Gadag | Betageri | Veterinary Dispensary, | Hulikote |
| 136 | Gadag | Mundargi | Dambal | Veterinary Dispensary, | Dambal |
| 137 | Gadag | Naragund | Konnur | Veterinary Dispensary, | Konnur |
| 138 | Gadag | Ron | Holealur | Veterinary Dispensary, | Holealur |
| 139 | Gulbarga | Afzalpur | Athnoor | Veterinary Dispensary, | Athnoor |
| 140 | Gulbarga | Afzalpur | Karajagi | Veterinary Dispensary, | Karajagi |
| 141 | Gulbarga | Aland | Khajuri | Veterinary Dispensary, | Khajuri |
| 142 | Gulbarga | Aland | Narona | Veterinary Dispensary, | Narona |
| 143 | Gulbarga | Chincholi | Ainapur | Veterinary Dispensary, | Ainapur |
| 144 | Gulbarga | Chincholi | Kodli | Veterinary Dispensary, | Kodli |
| 145 | Gulbarga | Chincholi | Sulepet | Veterinary Dispensary, | Sulepet |
| 146 | Gulbarga | Chittapur | Gundgurthi | Veterinary Dispensary, | Gundgurthi (O.I) |
| 147 | Gulbarga | Chittapur | Kaalgi | Veterinary Dispensary, | Kaalgi |
| 148 | Gulbarga | Chittapur | Nalwar | Veterinary Dispensary, | Nalwar |
| 149 | Gulbarga | Gulbarga | Faratabad | Veterinary Dispensary, | Faratabad |
| 150 | Gulbarga | Gulbarga | Mahagaon | Veterinary Dispensary, | Mahagaon |
| 151 | Gulbarga | Jewargi | Andola | Veterinary Dispensary, | Andola |
| 152 | Gulbarga | Jewargi | Ijeri | Veterinary Dispensary, | Ijeri |
| 153 | Gulbarga | Jewargi | Nelogi | Veterinary Dispensary, | Nelogi |
| 154 | Gulbarga | Jewargi | Yadrami | Veterinary Dispensary, | Yadrami |
| 155 | Gulbarga | Sedam | Adaki | Veterinary Dispensary, | Adaki |
| 156 | Gulbarga | Sedam | Kodla | Veterinary Dispensary, | Kodla |
| 157 | Gulbarga | Sedam | Mudhol | Veterinary Dispensary, | Mudhol |
| 158 | Yadgir | Shahapur | Doranahalli | Veterinary Dispensary, | Doranahalli |
| 159 | Yadgir | Shahapur | Gogi | Veterinary Dispensary, | Gogi |
| 160 | Yadgir | Shahapur | Wadagera | Veterinary Dispensary, | Wadagera |
| 161 | Yadgir | Shorapur | Kakkera | Veterinary Dispensary, | Kakkera |
| 162 | Yadgir | Shorapur | Kembhavi | Veterinary Dispensary, | Kembhavi |
| 163 | Yadgir | Shorapur | Kodekal | Veterinary Dispensary, | Kodekal |
| 164 | Yadgir | Yadgir | Balichakra | Veterinary Dispensary, | Balichakra |
| 165 | Yadgir | Yadgir | Konkal | Veterinary Dispensary, | Konkal |
| 166 | Yadgir | Yadgir | Saidapur | Veterinary Dispensary, | Saidapur |
| 167 | Hassan | Alur | K. Hosakote | Veterinary Dispensary, | K. Hosakote |
| 168 | Hassan | Arakalgud | Doddamagge | Veterinary Dispensary, | Doddamagge |
| 169 | Hassan | Arakalgud | Mallipatna | Veterinary Dispensary, | Mallipatna |
| 170 | Hassan | Arakalgud | Ramanathapura | Veterinary Dispensary, | Ramanathapura |
| 171 | Hassan | Arasikere | Banavara | Veterinary Dispensary, | Banavara |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 172 | Hassan | Arasikere | Gandasi | Veterinary Dispensary, | Gandasi |
| 173 | Hassan | Arasikere | Kanakatte | Veterinary Dispensary, | Kanakatte |
| 174 | Hassan | Belur | Arehally | Veterinary Dispensary, | Arehally |
| 175 | Hassan | Channarayapatna | Bagur | Veterinary Dispensary, | Bagur |
| 176 | Hassan | Channarayapatna | Hirisave | Veterinary Dispensary, | Hirisave |
| 177 | Hassan | Channarayapatna | Nuggehalli | Veterinary Dispensary, | Nuggehalli |
| 178 | Hassan | Hassan | Dudda | Veterinary Dispensary, | Dudda |
| 179 | Hassan | Hassan | Kattaya | Veterinary Dispensary, | Kattaya |
| 180 | Hassan | Hassan | Salagame | Veterinary Dispensary, | Salagame |
| 181 | Hassan | Holenarasipur | Hallimysore | Veterinary Dispensary, | Hallimysore |
| 182 | Hassan | Sakaleshpur | Belagodu | Veterinary Dispensary, | Belagodu |
| 183 | Hassan | Sakaleshpur | Hanbalu | Veterinary Dispensary, | Hanbalu |
| 184 | Hassan | Sakaleshpur | Hethur | Veterinary Dispensary, | Hethur |
| 185 | Hassan | Sakaleshpur | Yesalur | Veterinary Dispensary, | Yesalur |
| 186 | Haveri | Haveri | Gutthal | Veterinary Dispensary, | Gutthal |
| 187 | Haveri | Haveri | Karajagi | Veterinary Dispensary, | Karajagi |
| 188 | Haveri | Hanagal | Bammanahalli | Veterinary Dispensary, | Bammanahalli |
| 189 | Haveri | Hirekerur | Hansbhavi | Veterinary Dispensary, | Hansbhavi |
| 190 | Haveri | Ranebennur | Kuppelur | Veterinary Dispensary, | Kuppelur |
| 191 | Haveri | Ranebennur | Medleri | Veterinary Dispensary, | Medleri |
| 192 | Haveri | Savanur | Hattimattur | Veterinary Dispensary, | Hattimattur |
| 193 | Haveri | Shiggaon | Dundasi | Veterinary Dispensary, | Dundasi |
| 194 | Kodagu | Madikeri | Bhagamandala | Veterinary Dispensary, | Bhagamandala |
| 195 | Kodagu | Madikeri | Napoklu | Veterinary Dispensary, | Napoklu |
| 196 | Kodagu | Madikeri | Sampaje | Veterinary Dispensary, | Sampaje |
| 197 | Kodagu | Somwarpet | Kodlipet | Veterinary Dispensary, | Kodlipet |
| 198 | Kodagu | Somwarpet | Shanivarasanthe | Veterinary Dispensary, | Shanivarasanthe |
| 199 | Kodagu | Somwarpet | Shanthahalli | Veterinary Dispensary, | Shanthahalli |
| 200 | Kodagu | Virajpet | Balale | Veterinary Dispensary, | Balale |
| 201 | Kodagu | Virajpet | Hudakeri | Veterinary Dispensary, | Hudakeri |
| 202 | Kodagu | Virajpet | Srimangala | Veterinary Dispensary, | Srimangala |
| 203 | Kolar | Bangarpet | Bethamangala | Veterinary Dispensary, | Bethamangala |
| 204 | Kolar | Bangarpet | Boodikote | Veterinary Dispensary, | Boodikote |
| 205 | Kolar | Bangarpet | Kamasandra | Veterinary Dispensary, | Kamasandra |
| 206 | Kolar | Bangarpet | Kyasamballi | Veterinary Dispensary, | Kyasamballi |
| 207 | Kolar | Kolar | Holoor | Veterinary Dispensary, | Holoor |
| 208 | Kolar | Kolar | Narasapura | Veterinary Dispensary, | Narasapura |
| 209 | Kolar | Kolar | Sugatooru | Veterinary Dispensary, | Sugatooru |
| 210 | Kolar | Kolar | Vakkaleri | Veterinary Dispensary, | Vakkaleri |
| 211 | Kolar | Malur | Lakkuru | Veterinary Dispensary, | Lakkuru |
| 212 | Kolar | Malur | Tekal | Veterinary Dispensary, | Tekal |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 213 | Kolar | Mulbagal | Avani | Veterinary Dispensary, | Avani |
| 214 | Kolar | Mulbagal | Byrakooru | Veterinary Dispensary, | Byrakooru |
| 215 | Kolar | Mulbagal | Thayalooru | Veterinary Dispensary, | Thayalooru |
| 216 | Kolar | Srinivasapur | Ronur | Veterinary Dispensary, | Ronur |
| 217 | Kolar | Srinivasapur | Royalpadu | Veterinary Dispensary, | Royalpadu |
| 218 | Kolar | Srinivasapur | Yeldur | Veterinary Dispensary, | Yeldur |
| 219 | Koppal | Gangavathi | Hulihyder | Veterinary Dispensary, | Hulihyder |
| 220 | Koppal | Gangavathi | Navali | Veterinary Dispensary, | Navali |
| 221 | Koppal | Gangavathi | Siddapur | Veterinary Dispensary, | Siddapur |
| 222 | Koppal | Gangavathi | Venkatagiri | Veterinary Dispensary, | Venkatagiri |
| 223 | Koppal | Koppal | Hitnal | Veterinary Dispensary, | Hitnal |
| 224 | Koppal | Koppal | Irkalgada | Veterinary Dispensary, | Irkalgada |
| 225 | Koppal | Kushtagi | Hanumanal | Veterinary Dispensary, | Hanumanal |
| 226 | Koppal | Kushtagi | Tavaragera | Veterinary Dispensary, | Tavaragera |
| 227 | Koppal | Yelburga | Hirewankalkunta | Veterinary Dispensary, | Hirewankalkunta |
| 228 | Koppal | Yelburga | Mangaloora | Veterinary Dispensary, | Mangaloora |
| 229 | Mandya | Krishnarajapet | Akkihebbal | Veterinary Dispensary, | Akkihebbal |
| 230 | Mandya | Krishnarajapet | Bookanakere | Veterinary Dispensary, | Bookanakere |
| 231 | Mandya | Krishnarajapet | Santhebachahalli | Veterinary Dispensary, | Santhebachahalli |
| 232 | Mandya | Maddur | Koppa | Veterinary Dispensary, | Koppa |
| 233 | Mandya | Malavalli | Halagur | Veterinary Dispensary, | Halagur |
| 234 | Mandya | Mandya | Dudda | Veterinary Dispensary, | Dudda |
| 235 | Mandya | Mandya | Kotthathi | Veterinary Dispensary, | Kotthathi |
| 236 | Mandya | Nagamangala | Bindiganavile | Veterinary Dispensary, | Bindiganavile |
| 237 | Mandya | Nagamangala | Devalapura | Veterinary Dispensary, | Devalapura |
| 238 | Mandya | Nagamangala | Honakere | Veterinary Dispensary, | Honakere |
| 239 | Mandya | Srirangapatna | Arakere | Veterinary Dispensary, | Arakere |
| 240 | Mandya | Srirangapatna | Belagola | Veterinary Dispensary, | Belagola |
| 241 | Mandya | Srirangapatna | K Settyhalli | Veterinary Dispensary, | K Settyhalli |
| 242 | Mysore | H.D. Kote | Antharasanthe | Veterinary Dispensary, | Antharasanthe |
| 243 | Mysore | H.D. Kote | Hampapura | Veterinary Dispensary, | Hampapura |
| 244 | Mysore | Hunsur | Bilikere | Veterinary Dispensary, | Bilikere |
| 245 | Mysore | Hunsur | Hanagodu | Veterinary Dispensary, | Hanagodu |
| 246 | Mysore | Krishnarajanaga | Hebbal | Veterinary Dispensary, | Hebbal |
| 247 | Mysore | Krishnarajanaga | Saligrama | Veterinary Dispensary, | Saligrama |
| 248 | Mysore | Mysore | Ilawala | Veterinary Dispensary, | Ilawala |
| 249 | Mysore | Nanjanagud | Hullahalli | Veterinary Dispensary, | Hullahalli |
| 250 | Mysore | Nanjanagud | Dodda Kovlande | Veterinary Dispensary, | Dodda Kovlande |
| 251 | Mysore | Piriyapatna | Bettadapura | Veterinary Dispensary, | Bettadapura |
| 252 | Mysore | Piriyapatna | Ravandoor | Veterinary Dispensary, | Ravandoor |
| 253 | Mysore | T. Narasipur | Mugur | Veterinary Dispensary, | Mugur |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 254 | Mysore | T. Narasipur | Talkad | Veterinary Dispensary, | Talkad |
| 255 | Raichur | Devadurga | Arkera | Veterinary Dispensary, | Arkera |
| 256 | Raichur | Devadurga | Gabbur | Veterinary Dispensary, | Gabbur |
| 257 | Raichur | Devadurga | Jalahalli | Veterinary Dispensary, | Jalahalli |
| 258 | Raichur | Lingasugur | Gurgunta | Veterinary Dispensary, | Gurgunta |
| 259 | Raichur | Lingasugur | Mudgal | Veterinary Dispensary, | Mudgal |
| 260 | Raichur | Manvi | Kallur | Veterinary Dispensary, | Kallur |
| 261 | Raichur | Manvi | Kavithala | Veterinary Dispensary, | Kavithala |
| 262 | Raichur | Manvi | Pamanakallur | Veterinary Dispensary, | Pamanakallur |
| 263 | Raichur | Raichur | Devasugur | Veterinary Dispensary, | Devasugur |
| 264 | Raichur | Raichur | Gillesugur | Veterinary Dispensary, | Gillesugur |
| 265 | Raichur | Raichur | Kalmala | Veterinary Dispensary, | Kalmala |
| 266 | Raichur | Raichur | Yeragera | Veterinary Dispensary, | Yeragera |
| 267 | Raichur | Sindhanur | Badarli | Veterinary Dispensary, | Badarli |
| 268 | Raichur | Sindhanur | Balaganur | Veterinary Dispensary, | Balaganur |
| 269 | Raichur | Sindhanur | Gorebal | Veterinary Dispensary, | Gorebal |
| 270 | Raichur | Sindhanur | Jalihal | Veterinary Dispensary, | Jalihal |
| 271 | Raichur | Sindhanur | Jawalgera | Veterinary Dispensary, | Jawalgera |
| 272 | Raichur | Sindhanur | Salgunda | Veterinary Dispensary, | Salgunda |
| 273 | Raichur | Sindhanur | Turvihal | Veterinary Dispensary, | Turvihal |
| 274 | Ramanagara | Channapatna | Virupakshapura | Veterinary Dispensary, | Virupakshapura |
| 275 | Ramanagara | Kanakapura | Kodihalli | Veterinary Dispensary, | Kodihalli |
| 276 | Ramanagara | Magadi | Madabala | Veterinary Dispensary, | Madabala |
| 277 | Ramanagara | Magadi | Thippasandra | Veterinary Dispensary, | Thippasandra |
| 278 | Shimoga | Bhadravathi | Kudaligere | Veterinary Dispensary, | Kudaligere |
| 279 | Shimoga | Hosanagara | Ripponpet | Veterinary Dispensary, | Ripponpet (O.I) |
| 280 | Shimoga | Hosanagar | Humcha | Veterinary Dispensary, | Humcha |
| 281 | Shimoga | Hosanagar | Nagara | Veterinary Dispensary, | Nagara |
| 282 | Shimoga | Sagar | Havinahalli | Veterinary Dispensary, | Havinahalli |
| 283 | Shimoga | Shikaripur | Hosuru | Veterinary Dispensary, | Hosuru |
| 284 | Shimoga | Shimoga | Haranahalli | Veterinary Dispensary, | Haranahalli |
| 285 | Shimoga | Shimoga | Kumshi | Veterinary Dispensary, | Kumshi |
| 286 | Shimoga | Shimoga | Nidige - 1 | Veterinary Dispensary, | Nidige |
| 287 | Shimoga | Sorab | Chandraguthi | Veterinary Dispensary, | Chandraguthi |
| 288 | Shimoga | Sorab | Kuppagadde | Veterinary Dispensary, | Kuppagadde |
| 289 | Shimoga | Sorab | Ulavi | Veterinary Dispensary, | Ulavi |
| 290 | Shimoga | Thirthahalli | Mandagadde | Veterinary Dispensary, | Mandagadde |
| 291 | Tumkur | C.N. Halli | Handanakere | Veterinary Dispensary, | Handanakere |
| 292 | Tumkur | C.N. Halli | Kandikere | Veterinary Dispensary, | Kandikere |
| 293 | Tumkur | C.N. Halli | Shettykere | Veterinary Dispensary, | Shettykere |
| 294 | Tumkur | Gubbi | Chandrashekarapura | Veterinary Dispensary, | Chandrashekarapura |

| Sl. No. | District | Taluk | Hobli | Existing Veterinary Dispensaries | |
|---|---|---|---|---|---|
| 295 | Tumkur | Gubbi | Chelur | Veterinary Dispensary, | Chelur |
| 296 | Tumkur | Gubbi | Hagalavadi | Veterinary Dispensary, | Hagalavadi |
| 297 | Tumkur | Gubbi | Nittur | Veterinary Dispensary, | Nittur |
| 298 | Tumkur | Koratagere | Kolala | Veterinary Dispensary, | Kolala |
| 299 | Tumkur | Kunigal | Amruthur | Veterinary Dispensary, | Amruthur |
| 300 | Tumkur | Kunigal | Huthridurga(Santhepete) | Veterinary Dispensary, | Santhepete |
| 301 | Tumkur | Kunigal | Yadiyur | Veterinary Dispensary, | Yadiyur |
| 302 | Tumkur | Madhugiri | I D Halli | Veterinary Dispensary, | I D Halli |
| 303 | Tumkur | Madhugiri | Kodigenahalli | Veterinary Dispensary, | Kodigenahalli |
| 304 | Tumkur | Madhugiri | Midigeshi | Veterinary Dispensary, | Midigeshi |
| 305 | Tumkur | Pavagada | Nagalamadike | Veterinary Dispensary, | Nagalamadike |
| 306 | Tumkur | Pavagada | Y N Hosakote | Veterinary Dispensary, | Y N Hosakote |
| 307 | Tumkur | Sira | Bukkapatna | Veterinary Dispensary, | Bukkapatna |
| 308 | Tumkur | Tiptur | Honnavalli | Veterinary Dispensary, | Honnavalli |
| 309 | Tumkur | Tumkur | Bellavi | Veterinary Dispensary, | Bellavi |
| 310 | Tumkur | Tumkur | Guluru | Veterinary Dispensary, | Guluru |
| 311 | Tumkur | Tumkur | Hebburu | Veterinary Dispensary, | Hebburu |
| 312 | Tumkur | Tumkur | Urdigere | Veterinary Dispensary, | Urdigere |
| 313 | Tumkur | Turuvekere | Dabbeghatta | Veterinary Dispensary, | Dabbeghatta |
| 314 | Tumkur | Turuvekere | Dandinashivara | Veterinary Dispensary, | Dandinashivara |
| 315 | Udupi | Karkala | Ajekar | Veterinary Dispensary, | Ajekar |
| 316 | Udupi | Kundapura | Byndoor | Veterinary Dispensary, | Byndoor |
| 317 | Udupi | Kundapura | Wandse | Veterinary Dispensary, | Wandse |
| 318 | Uttara Kannada | Haliyal | Murkwad | Veterinary Dispensary, | Murkwad |
| 319 | Uttara Kannada | Honnavar | Manki | Veterinary Dispensary, | Manki |
| 320 | Uttara Kannada | Karwar | Ghadsai | Veterinary Dispensary, | Ghadsai |
| 321 | Uttara Kannada | Kumta | Mirjan | Veterinary Dispensary, | Mirjan |
| 322 | Uttara Kannada | Mundgod | Pala | Veterinary Dispensary, | Pala |
| 323 | Uttara Kannada | Sirsi | Banavasi | Veterinary Dispensary, | Banavasi |
| 324 | Uttara Kannada | Sirsi | Hulekal | Veterinary Dispensary, | Hulekal |
| 325 | Uttara Kannada | Joida | Kumbarwada | Veterinary Dispensary, | Kumbarwada |
| 326 | Uttara Kannada | Yellapur | Manchikeri | Veterinary Dispensary, | Manchikeri |
| 327 | Uttara Kannada | Siddapura | Umblamane (Herur) | Veterinary Dispensary, | Herur |

**ಹೆಚ್.ಪ್ರಸನ್ನ**
ಪೀಠಾಧಿಕಾರಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ)

**PR.802**
**SC.100**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಯುಷ್ ಇಲಾಖೆಯ ವೈದ್ಯರುಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳಿಗೆ ನೀಡುತ್ತಿರುವ ಸರಿಸಮಾನ, ವೇತನಶ್ರೇಣಿ, ಭತ್ಯೆ, ಇತರೆ ಸೌಲಭ್ಯಗಳನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** (1) ಕರ್ನಾಟಕ ರಾಜ್ಯ ಸರ್ಕಾರಿ ಆಯುಷ್ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು, ಇವರ ಪತ್ರ ದಿನಾಂಕ:20.06.2011.

(2) ಟಾಸ್ಕ್‌ಫೋರ್ಸ್ ನೀಡಿದ ವರದಿ ದಿನಾಂಕ:10.01.2002.

(3) ಆಯುಷ್ ನಿರ್ದೇಶಕರ ಪತ್ರ ಸಂ:ಆಯುಷ್/46/ಸಿಬ್ಬಂದಿ(4)/2009–10 ದಿನಾಂಕ:5.3.2011.

(4) ದಿನಾಂಕ:10.01.2013ರ ಸಚಿವ ಸಂಪುಟ ಸಭೆಯ ವಿಷಯ ಸಂಖ್ಯೆ:ಸಿ:47/2013ರಲ್ಲಿ ತೆಗೆದುಕೊಂಡ ತೀರ್ಮಾನ.

(5) ಸರ್ಕಾರದ ಆದೇಶ ಸಂಖ್ಯೆ:ಆಕುಕ 357 ಪಿಐಎಂ 2012 ದಿನಾಂಕ:24.01.2013.

(6) ಆಯುಷ್ ನಿರ್ದೇಶಕರ ಪತ್ರ ಸಂಖ್ಯೆ:ಆಯುಷ್/46/ಸಿಬ್ಬಂದಿ/4/2013–14 ದಿನಾಂಕ:26.06.2013.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ(1)ರ ಓದಲಾದ ಪತ್ರದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ಆಯುಷ್ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು ಇವರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಅಲೋಪತಿ ವೈದ್ಯರುಗಳಿಗೆ ಮತ್ತು ಆಯುಷ್ ವೈದ್ಯರುಗಳಿಗೆ, ವೈದ್ಯಕೀಯ ಕೋರ್ಸಿಗೆ ಸೇರಲು ನಿಗಧಿ ಪಡಿಸಿರುವ ವಿದ್ಯಾರ್ಹತೆ, ವಿದ್ಯಾಭ್ಯಾಸದ ಅವಧಿ ಮತ್ತು ವೈದ್ಯರುಗಳ ನೇರ ನೇಮಕಾತಿಯ ಆಯ್ಕೆಗೆ ನಿಗಧಿಪಡಿಸಿರುವ ಕನಿಷ್ಠ ವಿದ್ಯಾರ್ಹತೆಯು ಒಂದೇ ಆಗಿದ್ದು, ಈ ಎರಡೂ ಹುದ್ದೆಗಳ ಕರ್ತವ್ಯ ಮತ್ತು ಜವಾಬ್ದಾರಿಗಳು ಒಂದೇ ಆಗಿದ್ದರೂ ಸಹ, ವೇತನ ಶ್ರೇಣಿಯಲ್ಲಿ, ಸ್ಥಾನಮಾನಗಳಲ್ಲಿ, ಬಹಳಷ್ಟು ತಾರತಮ್ಯಗಳಿರುವುದರಿಂದ, ಅಲೋಪತಿ ವೈದ್ಯರುಗಳಿಗೆ ಸರಿಸಮಾನವಾದ ವೇತನಶ್ರೇಣಿ, ಭತ್ಯೆ, ಇತರೆ ಸೌಲಭ್ಯಗಳು, ಸ್ಥಾನಮಾನಗಳು ಹಾಗೂ ಕಾಲಕಾಲಕ್ಕೆ ಅವರಿಗೆ ನೀಡಲಾಗುವ ಎಲ್ಲಾ ಸೌಲಭ್ಯ/ಸವಲತ್ತುಗಳನ್ನು ಆಯುಷ್ ವೈದ್ಯರುಗಳಿಗೂ ವಿಸ್ತರಿಸಬೇಕೆಂದು ಹಾಗೂ ಆಯುಷ್ ವೈದ್ಯರನ್ನೂ ಸಹ ಗ್ರೂಪ್ "ಎ" ವೃಂದಕ್ಕೆ ಸೇರಿಸುವುದರ ಮೂಲಕ ಈಗ ಉಂಟಾಗಿರುವ ತಾರತಮ್ಯವನ್ನು ನಿವಾರಿಸುವಂತೆ ಸರ್ಕಾರಕ್ಕೆ ಬೇಡಿಕೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರಲ್ಲಿನ, ಡಾ॥ಹೆಚ್.ಸುದರ್ಶನ್‌ರವರ ಅಧ್ಯಕ್ಷತೆಯಲ್ಲಿ ಸ್ಥಾಪಿತವಾಗಿದ್ದ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ "ಕಾರ್ಯಪಡೆ"ಯೂ (Task Force) ಸಹ, ಸರ್ಕಾರಕ್ಕೆ ಸಲ್ಲಿಸಿದ ತನ್ನ ವರದಿಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ವೈದ್ಯರುಗಳಿಗೆ ನೀಡುವ ವೇತನ ಇತ್ಯಾದಿ ಸ್ಥಾನಮಾನಗಳನ್ನು ಆಯುಷ್ ವೈದ್ಯರುಗಳಿಗೆ ವಿಸ್ತರಿಸುವುದು ಪ್ರಮುಖವಾಗಿದೆ ಎಂದು ಶಿಫಾರಸ್ಸು ಮಾಡಿರುತ್ತದೆ.

ಈ ಹಿಂದೆ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನಶ್ರೇಣಿ ರೂಪಿಸಲು ರಚಿತವಾದ 5ನೇ ವೇತನ ಆಯೋಗಕ್ಕೆ, ಅಲೋಪತಿ ವೈದ್ಯರುಗಳಿಗೆ ನೀಡಿರುವ/ನೀಡುವ ವೇತನಶ್ರೇಣಿಯನ್ನು ಆಯುಷ್ ವೈದ್ಯರುಗಳಿಗೂ ನೀಡುವಂತೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಅದರನ್ವಯ 5ನೇ ವೇತನ ಆಯೋಗವು ದಿನಾಂಕ:22.05.2007ರಂದು ಸಲ್ಲಿಸಿದ ವರದಿಯಲ್ಲಿ ಆಯುಷ್ ಇಲಾಖೆಯ ವೈದ್ಯರು ದರ್ಜೆ–2 ವೃಂದದ ವೇತನ ಶ್ರೇಣಿಯನ್ನು ರೂ:11,400–21,600 ರಿಂದ ರೂ:13,000–23850ಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿದ್ದು, ಅದನ್ನು ದಿನಾಂಕ:1.8.2008 ರಿಂದ ಕಾರ್ಯರೂಪಕ್ಕೆ ತರಲಾಗಿತ್ತು. ಆದರೂ ಸಹ ಅಲೋಪತಿ ಮತ್ತು ಆಯುಷ್ ವೈದ್ಯರುಗಳ ವೇತನ ಶ್ರೇಣಿಗಳಲ್ಲಿ ತಾರತಮ್ಯವು ಹಾಗೆಯೇ ಮುಂದುವರಿದಿತ್ತು. ಇದೇ ವಿಷಯದಲ್ಲಿ 2011ರಲ್ಲಿ ರಚಿತವಾದ ಅಧಿಕಾರಿ ವೇತನ ಸಮಿತಿ ಮುಂದೆ ಪ್ರಸ್ತಾವನೆ ಸಲ್ಲಿಸಿದಾಗ್ಯೂ ಕೂಡ ಸದರಿ ಸಮಿತಿಯು ಈ ವಿಷಯವನ್ನು ಪರಿಗಣಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಆಯುಷ್ ಇಲಾಖೆಯ ನಿರ್ದೇಶಕರು ಈ ಕೆಳಗಿನ ಸಮರ್ಥನೆಯೊಂದಿಗೆ ಅಲೋಪತಿ ವೈದ್ಯರುಗಳಿಗೆ ನೀಡಲಾಗುತ್ತಿರುವ ವೇತನಶ್ರೇಣಿ ಮತ್ತು ಇತರೆ ಸವಲತ್ತುಗಳನ್ನು ಆಯುಷ್ ವೈದ್ಯರುಗಳಿಗೂ ಮಂಜೂರು ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

(ಅ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಅಲೋಪತಿ ವೈದ್ಯರುಗಳು ಹೊಂದಿರುವ ಎಂ.ಬಿ.ಬಿ.ಎಸ್., ಪದವಿಯಂತೆ ಆಯುಷ್ ವೈದ್ಯರುಗಳು ಪಡೆಯುವ ಪದವಿಗಳು ಅಂದರೆ ಬಿ.ಎ.ಎಂ.ಎಸ್, ಬಿ.ಎನ್.ವೈ.ಎಸ್, ಬಿ.ಯು.ಎಂ.ಎಸ್ ಮತ್ತು ಬಿ.ಹೆಚ್.ಎಂ.ಎಸ್. ಕೋರ್ಸುಗಳ ಅವಧಿ ಐದೂವರೆ ವರ್ಷಗಳಾಗಿರುತ್ತವೆ.

(ಆ) ಎಂ.ಬಿ.ಬಿ.ಎಸ್. ಮತ್ತು ಆಯುಷ್ ಕೋರ್ಸ್‌ಗಳ ಪ್ರವೇಶಕ್ಕೆ ನಿಗಧಿಪಡಿಸಿದ ಕನಿಷ್ಠ ವಿದ್ಯಾರ್ಹತೆಯು ಪಿ.ಯು.ಸಿ.(ವಿಜ್ಞಾನ) ಆಗಿದ್ದು ವಿಶ್ವವಿದ್ಯಾಲಯವೂ ಒಂದೇ ಆಗಿರುತ್ತದೆ.

(ಇ) ಕೇಂದ್ರ ಸರ್ಕಾರ ಮತ್ತು ಇತರೆ ಕೆಲವು ರಾಜ್ಯ ಸರ್ಕಾರಗಳ ಸೇವೆಯಲ್ಲಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳ ವೇತನ ಶ್ರೇಣಿ ಒಂದೇ ಆಗಿರುತ್ತದೆ.

(ಈ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಇಲಾಖೆಯ ಅಲೋಪತಿ ವೈದ್ಯರುಗಳಂತೆ, ಆಯುಷ್ ಇಲಾಖೆಯ ವೈದ್ಯರುಗಳೂ ಸಹ ಗ್ರಾಮಾಂತರ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ.

(ಉ)ಅಲೋಪತಿ ವೈದ್ಯಕೀಯ ಕಾಲೇಜುಗಳ ಬೋಧಕ ಸಿಬ್ಬಂದಿಗೆ ನೀಡುವ AICTE ವೇತನ ಶ್ರೇಣಿಯನ್ನು ಆಯುಷ್ ಬೋಧಕ ಸಿಬ್ಬಂದಿಗೂ ಸಹ ನೀಡಲಾಗುತ್ತಿದೆ.

ಆಯುಷ್ ಇಲಾಖೆಯ ವೈದ್ಯರು ಹಾಗೂ ಅಲೋಪತಿ ವೈದ್ಯರುಗಳಿಗೆ ಇರುವ ವೇತನ ತಾರತಮ್ಯ ಈ ಕೆಳಗಿನಂತಿರುತ್ತದೆ; (ಅಧಿಕಾರಿ ವೇತನ ಸಮಿತಿ–2011ರ ವರದಿಯಂತೆ)

| ಕ್ರ.ಸಂ. | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ | | ಆಯುಷ್ ಇಲಾಖೆ | |
|---|---|---|---|---|
| | ವೃಂದದ ಹೆಸರು | ಪ್ರಸ್ತುತ ವೇತನ ಶ್ರೇಣಿ | ವೃಂದದ ಹೆಸರು | ಪ್ರಸ್ತುತ ವೇತನ ಶ್ರೇಣಿ |
| 1 | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ ಸಹಾಯಕ ಶಸ್ತ್ರ ಚಿಕಿತ್ಸಕ | 28,100–50,100 | ವೈದ್ಯರು ದರ್ಜೆ–2 | 26,000–47,700 |
| 2 | ಉಪಶಸ್ತ್ರ ಚಿಕಿತ್ಸಕ/ಹಿರಿಯ ತಜ್ಞ | 30,400–51,300 | ವೈದ್ಯರು ದರ್ಜೆ–1 | 28,100–50,100 |
| 3 | ಉಪಮುಖ್ಯ ವೈದ್ಯಾಧಿಕಾರಿ/ಉಪನಿರ್ದೇಶಕ/ ಜಿಲ್ಲಾ ಶಸ್ತ್ರ ಚಿಕಿತ್ಸಕ | 36,300–53,850 | ಉಪನಿರ್ದೇಶಕ | 36300–53,850 |

ಸರ್ಕಾರದ ಆದೇಶ ಸಂಖ್ಯೆ:-ಆಕುಕ 222 ಎಂಎಸ್‌ಎಸ್ 90, ದಿನಾಂಕ 19-07-1991ರನ್ವಯ ಅಲೋಪತಿ ವೈದ್ಯರುಗಳಿಗೆ, 6 ವರ್ಷ ಮತ್ತು 13 ವರ್ಷಗಳ ಸೇವೆಗೆ ಕ್ರಮವಾಗಿ 1 ಮತ್ತು 2 ನೇ ಕಾಲಬದ್ಧ ಮುಂಬಡ್ತಿ ನೀಡಿದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ ಆಕುಕ 557 ಹೆಚ್‌ಎಸ್‌ಹೆಚ್ 2011, ದಿನಾಂಕ 03-01-2012ರಲ್ಲಿ 20 ವರ್ಷಗಳ ಸತತ ಸೇವೆಗೆ ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮವನ್ನು ನೀಡಿ 3ನೇ ಕಾಲಬದ್ಧ ಮುಂಬಡ್ತಿಯನ್ನು ನೀಡಿದೆ. ಸದರಿ ಆದೇಶಗಳನ್ವಯ ಆಯುಷ್ ವೈದ್ಯರುಗಳಿಗೂ ಈ ಕೆಳಗಿನಂತೆ ಕಾಲಬದ್ಧ ಮುಂಬಡ್ತಿಯನ್ನು ನೀಡಬೇಕಾಗುತ್ತದೆ.

ಯಾವುದೇ ಪದೋನ್ನತಿಯಿಲ್ಲದೆ ಒಂದೇ ಹುದ್ದೆಯಲ್ಲಿ 06, 13 ಮತ್ತು 20 ವರ್ಷಗಳ ಸೇವೆ ಸಲ್ಲಿಸಿರುವ ವೈದ್ಯರುಗಳಿಗೆ ಕಾಲಬದ್ಧ ಮುಂಬಡ್ತಿಯನ್ನು ಈ ಕೆಳಕಂಡಂತೆ ನೀಡಬೇಕಾಗುತ್ತದೆ:-

ಅ) 6 ವರ್ಷಗಳ ಒಳಗಿನ ಸೇವೆಯನ್ನು ಹೊಂದಿರುವ ವೈದ್ಯರುಗಳಿಗೆ ರೂ.28,100-50,100 ವೇತನ ಶ್ರೇಣಿ ನಿಗಧಿಪಡಿಸುವುದು.

ಆ) ಯಾವುದೇ ಪದೋನ್ನತಿಯನ್ನು ಪಡೆಯದೆ 06 ವರ್ಷಗಳ ಸೇವೆಯನ್ನು ಪೂರೈಸಿರುವ ವೈದ್ಯರುಗಳಿಗೆ ರೂ:30,400-51,300 ವೇತನ ಶ್ರೇಣಿ ನಿಗಧಿಪಡಿಸುವುದು.

ಇ) ಯಾವುದೇ ಪದೋನ್ನತಿಯನ್ನು ಪಡೆಯದೆ 13 ವರ್ಷಗಳ ಸೇವೆಯನ್ನು ಪೂರೈಸಿರುವ ವೈದ್ಯರುಗಳಿಗೆ ರೂ:36,300-53,850 ವೇತನ ಶ್ರೇಣಿ ನಿಗಧಿಪಡಿಸುವುದು.

ಈ) ಯಾವುದೇ ಪದೋನ್ನತಿಯನ್ನು ಪಡೆಯದೆ 20 ವರ್ಷಗಳ ಸೇವೆಯನ್ನು ಪೂರೈಸಿರುವ ವೈದ್ಯರುಗಳಿಗೆ ರೂ:38,100-55,200 ವೇತನ ಶ್ರೇಣಿ ನಿಗಧಿಪಡಿಸುವುದು.

ಸರ್ಕಾರವು ಮೇಲೆ ಕ್ರಮಸಂಖ್ಯೆ(5)ರಲ್ಲಿ ಓದಲಾದ ದಿನಾಂಕ 24.01.2013ರ ಆದೇಶದಲ್ಲಿ ಆಯುಷ್ ಇಲಾಖೆಯ ವೈದ್ಯರುಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯರುಗಳಿಗೆ ನೀಡಲಾಗುತ್ತಿರುವಂತೆ ಸರಿಸಮಾನ ವೇತನ, ಸ್ನಾತಕೋತ್ತರ ಭತ್ಯೆ ಹಾಗೂ ಗ್ರಾಮೀಣ ಭತ್ಯೆ ಸೌಲಭ್ಯಗಳನ್ನು ವಿಸ್ತರಿಸಿ ಆದೇಶ ಹೊರಡಿಸಿತ್ತು. ಮೇಲೆ ಕ್ರಮಸಂಖ್ಯೆ(6)ರಲ್ಲಿ ಓದಲಾದ ದಿನಾಂಕ 26.06.2013ರ ಪತ್ರದಲ್ಲಿ ಆಯುಷ್ ನಿರ್ದೇಶಕರು ಸರ್ಕಾರವು ದಿನಾಂಕ 24.01.2013ರ ಆದೇಶದಲ್ಲಿ ಹಿರಿಯ ವೈದ್ಯಾಧಿಕಾರಿಗಳು (ಆಯುಷ್), ಉಪ ನಿರ್ದೇಶಕರು ಮತ್ತು ಉಪನಿರ್ದೇಶರು (ಆಯ್ಕೆ ಶ್ರೇಣಿ) ಎಂದು ಪರಿಗಣಿಸಿ ಹೆಚ್ಚಿನ ವೇತನ ಶ್ರೇಣಿ ನೀಡಿರುವುದರಿಂದ ನಮಗೆ ಹೆಚ್ಚಿನ ವೇತನ ಶ್ರೇಣಿ ನೀಡಿ ಹಿರಿಯ ವೈದ್ಯಾಧಿಕಾರಿಗಳು, ಉಪ ನಿರ್ದೇಶಕರು ಮತ್ತು ಉಪನಿರ್ದೇಶಕರು (ಆಯ್ಕೆ ಶ್ರೇಣಿ) ಎಂದು ಪರಿಗಣಿಸಿ ತತ್ಸಮಾನ ಹುದ್ದೆಗಳನ್ನು ನೀಡಬೇಕೆಂದು ಕೋರುತ್ತಿದ್ದಾರೆ. ಹಿರಿಯ ವೈದ್ಯಾಧಿಕಾರಿ ಆಯುಷ್ ಮತ್ತು ಉಪನಿರ್ದೇಶಕರುಗಳ ಹುದ್ದೆಗಳು ಶೇ.100ರಷ್ಟು ಪದೋನ್ನತಿ ಹುದ್ದೆಗಳಾಗಿದ್ದು, ನಿಯಮಾನುಸಾರ ಪದೋನ್ನತಿ ಹೊಂದಿದ ವೈದ್ಯರುಗಳಿಗೆ ಮಾತ್ರ ಈ ಹುದ್ದೆಗಳು ಸ್ಥಾನಪನ್ನ ಹುದ್ದೆಗಳೆಂದು ಧಾರಣೆ ಮಾಡಬಹುದಾಗಿದೆ. ಆದುದರಿಂದ ಈ ಆದೇಶದಲ್ಲಿರುವ " ಹಿರಿಯ ವೈದ್ಯಾಧಿಕಾರಿ" (ಆಯುಷ್) ಮತ್ತು "ಉಪನಿರ್ದೇಶಕರು" ಮತ್ತು ಉಪ ನಿರ್ದೇಶಕರು (ಆಯ್ಕೆಶ್ರೇಣಿ) ಎಂದು ಪರಿಗಣಿಸಿ ವೇತನ ಶ್ರೇಣಿ ನೀಡಬಹುದೆಂಬ ಶಬ್ದ ವೃಂದಗಳನ್ನು ತೆಗೆದುಹಾಕುವಂತೆ ಪ್ರಸ್ತಾಪಿಸಿರುತ್ತಾರೆ. ದಿನಾಂಕ:24.01.2013ರ ಆದೇಶದನ್ವಯ ವೈದ್ಯರುಗಳ ಸೇವಾ ಅವಧಿಯನ್ನು ಪರಿಗಣಿಸಿ ಅವರಿಗೆ ಹೆಚ್ಚಿನ ವೇತನ ಶ್ರೇಣಿಯನ್ನು ನೀಡಬಹುದಾಗಿರುತ್ತದೆಯೇ ಹೊರತು ಹೆಚ್ಚಿನ ಸ್ಥಾನಮಾನದ ಹುದ್ದೆಗಳನ್ನು ನೀಡಲು ಅವಕಾಶವಿರುವುದಿಲ್ಲ ಮತ್ತು ಆ ರೀತಿ ಹುದ್ದೆಗಳನ್ನು ಸೃಜಿಸಲು ಸಾಧ್ಯವಿರುವುದಿಲ್ಲ. ಆದುದರಿಂದ ದಿನಾಂಕ:24.01.2013ರ ಆದೇಶಕ್ಕೆ ತಿದ್ದುಪಡಿ ಮಾಡುವಂತೆ ಕೋರಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಸರ್ಕಾರವು ಮೇಲೆ ಓದಲಾದ ಕ್ರಮಸಂಖ್ಯೆ(5)ರಲ್ಲಿನ ಆದೇಶವನ್ನು ಪರಿಷ್ಕರಿಸಿ ಪರಿಷ್ಕೃತ ಆದೇಶ ಹೊರಡಿಸಲು ತೀರ್ಮಾನಿಸಿದೆ.

ದಿನಾಂಕ:10.01.2013ರಂದು ನಡೆದ ಸಚಿವ ಸಂಪುಟದ ವಿಷಯ ಸಂಖ್ಯೆ:ಸಿ:47/2013ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ವೈದ್ಯರುಗಳಿಗೆ ನೀಡಲಾಗುತ್ತಿರುವ ವೇತನಶ್ರೇಣಿ, ಭತ್ಯೆ, ಸೌಲಭ್ಯಗಳನ್ನು ಆಯುಷ್ ಇಲಾಖೆಯ ವೈದ್ಯರುಗಳಿಗೂ ಸಹ ವಿಸ್ತರಿಸಲು ಅನುಮೋದನೆ ನೀಡಿದೆ. ಆದ್ದರಿಂದ ಈ ಕೆಳಗಿನ ಆದೇಶ;

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 357 ಪಿಐಎಂ 2012, ಬೆಂಗಳೂರು, ದಿನಾಂಕ: 31-07-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂ:ಆಕುಕ 357 ಪಿಐಎಂ 2012 ದಿನಾಂಕ:24.01.2013ರನ್ನು ಮಾರ್ಪಡಿಸಿ, ಆಯುಷ್ ಇಲಾಖೆಯ ವೈದ್ಯರು ದರ್ಜೆ-2 ವೃಂದದ ಹುದ್ದೆಯನ್ನು ಗ್ರೂಪ್-ಬಿ ವೃಂದದಿಂದ ಗ್ರೂಪ್-ಎ ವೃಂದಕ್ಕೆ ಮೇಲ್ದರ್ಜೆಗೇರಿಸಿ, ವೈದ್ಯಾಧಿಕಾರಿ ಎಂದು ಪದನಾಮೀಕರಿಸಿ, ವೈದ್ಯರು ದರ್ಜೆ-1 ಹುದ್ದೆಯನ್ನು ಮೇಲ್ದರ್ಜೆಗೇರಿಸಿ, ಹಿರಿಯ ವೈದ್ಯಾಧಿಕಾರಿ ಎಂದು ಪದನಾಮೀಕರಿಸಿ ಆಯುಷ್ ಇಲಾಖೆಯ ವೈದ್ಯರುಗಳಿಗೆ ಈ ಕೆಳಗಿನಂತೆ ವೇತನ ಶ್ರೇಣಿಗಳನ್ನು ಸರ್ಕಾರವು ನಿಗಧಿ ಪಡಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪ್ರಸ್ತುತ ವೃಂದದ ಹೆಸರು/ವೇತನ ಶ್ರೇಣಿ | ಪರಿಷ್ಕರಿಸಿದ ವೃಂದದ ಹೆಸರು/ವೇತನ ಶ್ರೇಣಿ |
|---|---|---|
| 1 | ವೈದ್ಯರು ದರ್ಜೆ-2(ಆಯುರ್ವೇದ)<br>ರೂ. 26,000-47,700 | ವೈದ್ಯಾಧಿಕಾರಿ (ಆಯುರ್ವೇದ)<br>ರೂ.28,100-50,100 |
| 2 | ವೈದ್ಯರು ದರ್ಜೆ-2(ಯುನಾನಿ)<br>ರೂ. 26,000-47,700 | ವೈದ್ಯಾಧಿಕಾರಿ (ಯುನಾನಿ)<br>ರೂ.28,100-50,100 |
| 3 | ವೈದ್ಯರು ದರ್ಜೆ-2(ಹೋಮಿಯೋಪತಿ)<br>ರೂ. 26,000-47,700 | ವೈದ್ಯಾಧಿಕಾರಿ (ಹೋಮಿಯೋಪತಿ)<br>ರೂ.28,100-50,100 |
| 4 | ವೈದ್ಯರು ದರ್ಜೆ-2(ಪ್ರಕೃತಿ ಚಿಕಿತ್ಸೆ ಮತ್ತು ಯೋಗ)<br>ರೂ. 26,000-47,700 | ವೈದ್ಯಾಧಿಕಾರಿ (ಪ್ರಕೃತಿ ಚಿಕಿತ್ಸೆ ಮತ್ತು ಯೋಗ)<br>ರೂ. 28,100-50,100 |
| 5 | ವೈದ್ಯರು ದರ್ಜೆ-1(ಆಯುರ್ವೇದ)<br>ರೂ. 28,100-47,700 | ಹಿರಿಯ ವೈದ್ಯಾಧಿಕಾರಿ (ಆಯುರ್ವೇದ)<br>ರೂ.30,400-51,300 |

| ಕ್ರಮ ಸಂಖ್ಯೆ | ಪ್ರಸ್ತುತ ವೃಂದದ ಹೆಸರು/ವೇತನ ಶ್ರೇಣಿ | ಪರಿಷ್ಕರಿಸಿದ ವೃಂದದ ಹೆಸರು/ವೇತನ ಶ್ರೇಣಿ |
|---|---|---|
| 6 | ವೈದ್ಯರು ದರ್ಜೆ–I(ಯುನಾನಿ) ರೂ. 28,100–50,100 | ಹಿರಿಯ ವೈದ್ಯಾಧಿಕಾರಿ(ಯುನಾನಿ) ರೂ.30,400–51,300 |
| 7 | ವೈದ್ಯರು ದರ್ಜೆ–I(ಹೋಮಿಯೋಪತಿ) ರೂ. 28,100–50,100 | ಹಿರಿಯ ವೈದ್ಯಾಧಿಕಾರಿ(ಹೋಮಿಯೋಪತಿ) ರೂ.30,400–51,300 |
| 8 | ವೈದ್ಯರು ದರ್ಜೆ–I(ಪ್ರಕೃತಿ ಚಿಕಿತ್ಸೆ ಮತ್ತು ಯೋಗ) ರೂ. 28,100–50,100 | ಹಿರಿಯ ವೈದ್ಯಾಧಿಕಾರಿ((ಪ್ರಕೃತಿ ಚಿಕಿತ್ಸೆ ಮತ್ತು ಯೋಗ) ರೂ.30,400–51,300 |
| 9 | ಉಪನಿರ್ದೇಶಕರು ರೂ.36,300–53,850 | ಉಪನಿರ್ದೇಶಕರು ರೂ.36,300–53,850 |

ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ವೈದ್ಯರುಗಳಿಗೆ ನೀಡಲಾಗುತ್ತಿರುವ 6, 13 ಮತ್ತು 20 ವರ್ಷಗಳ ಕಾಲಬದ್ಧ ಮುಂಬಡ್ತಿಯನ್ನು ಆಯುಷ್ ಇಲಾಖೆಯ ವೈದ್ಯರುಗಳಿಗೂ ವಿಸ್ತರಿಸಿ ಈ ಕೆಳಗಿನಂತೆ ನಿಗಧಿಪಡಿಸಿದೆ.

ಅ) 6 ವರ್ಷಗಳ ಒಳಗಿನ ಸೇವೆಯನ್ನು ಹೊಂದಿರುವ ವೈದ್ಯರುಗಳಿಗೆ ರೂ.28,100–50,100 ವೇತನ ಶ್ರೇಣಿ ನಿಗಧಿಪಡಿಸುವುದು.

ಆ) ಯಾವುದೇ ಪದೋನ್ನತಿಯನ್ನು ಪಡೆಯದೆ 06 ವರ್ಷಗಳ ತೃಪ್ತಿದಾಯಕ ಸೇವೆಯನ್ನು ಪೂರೈಸಿರುವ ವೈದ್ಯರುಗಳಿಗೆ ರೂ:30,400–51,300 ವೇತನ ಶ್ರೇಣಿ ನಿಗಧಿಪಡಿಸುವುದು.

ಇ) ಯಾವುದೇ ಪದೋನ್ನತಿಯನ್ನು ಪಡೆಯದೆ 13 ವರ್ಷಗಳ ತೃಪ್ತಿದಾಯಕ ಸೇವೆಯನ್ನು ಪೂರೈಸಿರುವ ವೈದ್ಯರುಗಳಿಗೆ ರೂ:36,300–53,850 ವೇತನ ಶ್ರೇಣಿ ನಿಗಧಿಪಡಿಸುವುದು.

ಈ) ಯಾವುದೇ ಪದೋನ್ನತಿಯನ್ನು ಪಡೆಯದೆ 20 ವರ್ಷಗಳ ತೃಪ್ತಿದಾಯಕ ಸೇವೆಯನ್ನು ಪೂರೈಸಿರುವ ವೈದ್ಯರುಗಳಿಗೆ ರೂ:38,100–55,200 ವೇತನ ಶ್ರೇಣಿ ನಿಗಧಿಪಡಿಸುವುದು.

ವೈದ್ಯರು ಗ್ರಾಮೀಣ ಪ್ರದೇಶದ * ಕೇಂದ್ರಸ್ಥಾನದಲ್ಲಿ ವಾಸಿಸುವುದು ಕಡ್ಡಾಯವೆಂಬ ಷರತ್ತಿಗೆ ಒಳಪಟ್ಟು ಮಾಸಿಕ ರೂ:7,000/– (ಏಳು ಸಾವಿರ ರೂಪಾಯಿಗಳು ಮಾತ್ರ) ಗ್ರಾಮೀಣಭತ್ಯೆ ನೀಡುವುದು.

ಸ್ನಾತಕೋತ್ತರ ಪದವಿ ಪಡೆದ ವೈದ್ಯರುಗಳಿಗೆ ಮಾಸಿಕ ರೂ:8,000/–(ಎಂಟು ಸಾವಿರ ರೂಪಾಯಿಗಳು ಮಾತ್ರ) ಸ್ನಾತಕೋತ್ತರ ಭತ್ಯೆಯನ್ನು ನೀಡುವುದು.

* **ವಿವರಣೆ:–** ಗ್ರಾಮೀಣ ಪ್ರದೇಶ ಅಂದರೆ, ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಕಾಯ್ದೆ 1976 ಅಥವಾ ಕರ್ನಾಟಕ ಮುನ್ಸಿಪಾಲಿಟೀಸ್ ಕಾಯ್ದೆ 1964ರಲ್ಲಿ ವ್ಯಾಖ್ಯಾನಿಸಿರುವಂತೆ ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಗೊಳ್ಳಲಿರುವ (transitional area) ಪ್ರದೇಶಗಳ ಹೊರತಾದ ಪ್ರದೇಶ ಎಂದು ಪರಿಭಾವಿಸತಕ್ಕದ್ದು.

ಗ್ರಾಮೀಣಭತ್ಯೆ ಹಾಗೂ ಸ್ನಾತಕೋತ್ತರ ಭತ್ಯೆ ಇವುಗಳ ಪೈಕಿ ಯಾವುದಾದರೂ ಒಂದು ಭತ್ಯೆಯನ್ನು ಮಾತ್ರ ಪಡೆಯಲು ವೈದ್ಯರು ಅರ್ಹರಿರುತ್ತಾರೆ.

ಸದರಿ ವೇತನ ಮತ್ತು ಭತ್ಯೆಗಳಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಇಲಾಖೆಗೆ ಒದಗಿಸಿರುವ ಆಯವ್ಯಯದ ಅನುದಾನದಿಂದಲೇ ಭರಿಸತಕ್ಕದ್ದು;

ಈ ಸೌಲಭ್ಯಗಳು **ದಿನಾಂಕ:10.01.2013** ರಿಂದ ಜಾರಿಗೆ ಬರುವಂತೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸಚಿವ ಸಂಪುಟದ ವಿಷಯ ಸಂಖ್ಯೆ:ಸಿ47/2013 ದಿನಾಂಕ:10.01.2013ರಲ್ಲಿ ಪಡೆದ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎನ್.ಹರಿಣಿಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**PR.808**

**SC.100**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹನುಮಂತರಾಯ ಪಿ.ಐ., ಡಿ.ಎಸ್.ಬಿ., ಘಟಕ, ಜಿಲ್ಲಾ ಪೊಲೀಸ್ ಕಛೇರಿ, ಗುಲ್ಬರ್ಗಾ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಪಿ.ಆರ್:22/2008 (ಡಿ.ಓ.ಬಿ. ಸಂಖ್ಯೆ: 479/08) ದಿನಾಂಕ: 05–5–2008
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/35/ಈವ/2008 (ಆ.ಪು. ಸಂಖ್ಯೆ: 415/ಈವ/2008) ದಿನಾಂಕ: 09–7–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 13–8–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)64/ 2008–09 ದಿನಾಂಕ: 22–12–2008 ಮತ್ತು 01–4–2013

**ಪ್ರಸ್ತಾವನೆ:**

ಶ್ರೀ ಹನುಮಂತರಾಯ ಪಿ.ಎಸ್.ಐ., (ಹಾಲಿ ಪಿ.ಐ.) ಇವರು ಲಿಂಗಸುಗೂರು ಪೊಲೀಸ್ ಠಾಣೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಹಾಗೂ ಕಾರ್ಯವಿಮುಖತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಮೋಟಾರ್ ವಾಹನ ಕಾಯ್ದೆ ಅಡಿಯಲ್ಲಿ ಸ್ಥಳದಲ್ಲಿ ದಂಡ ವಿಧಿಸುವ ಪುಸ್ತಕ ರಶೀದಿ ಸಂಖ್ಯೆ: 0523019 ರಿಂದ 0523025 ಒಟ್ಟು 7 ರಸೀದಿಗಳನ್ನು ಕಳೆದು ದುರ್ನಡತೆ ಹಾಗೂ ಕಾರ್ಯವಿಮುಖತೆ ಪ್ರದರ್ಶಿಸಿದ ಬಗ್ಗೆ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 05–5–2008ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಆರು (6) ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09.07.2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ದುರ್ನಡತೆ ಹಾಗೂ ಕಾರ್ಯವಿಮುಖತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 266 ಪೊಸಿಅ 2008 ಬೆಂಗಳೂರು, ದಿನಾಂಕ: 30–7–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹನುಮಂತರಾಯ ಪಿ.ಐ., ಡಿ.ಎಸ್.ಬಿ., ಘಟಕ, ಜಿಲ್ಲಾ ಪೊಲೀಸ್ ಕಛೇರಿ, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR.806
SC.30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಎನ್. ನರಹರಿ, ಅನುಯಾಯಿ, ಎ.ಪಿ.ಟಿ.ಎಸ್, ಯಲಹಂಕ, ಬೆಂಗಳೂರು ನಗರ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಪೊಲೀಸ್ ಅಧೀಕ್ಷಕರು ಹಾಗೂ ಪ್ರಾಚಾರ್ಯರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಮೊತಶಾ:ಸಿಬ್ಬಂದಿ–1/2009–10 ದಿನಾಂಕ: 19–8–2009
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು, ಇವರ ಆದೇಶ ಸಂಖ್ಯೆ: ತ–1/ಸಿಬ್ಬಂದಿ/ಅಪೀಲು–3/2009 (ಓ.ಬಿ.6/2010) ದಿನಾಂಕ: 10–02–2010
3. ಪ್ರಾಚಾರ್ಯರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಪೊತಶಾ:ಸಿಬ್ಬಂದಿ–1/1/2010–11 ದಿನಾಂಕ: 26–5–2010
4. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು, ಇವರ ಆದೇಶ ಸಂಖ್ಯೆ: ತ–1/ಸಿಬ್ಬಂದಿ/ಅಪೀಲು–8/2010 (ಓ.ಬಿ.27/2010) ದಿನಾಂಕ: 06–9–2010
5. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18–11–2010
6. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)75/2010–11 ದಿನಾಂಕ: 16–10–2012

**ಪ್ರಸ್ತಾವನೆ:**

ಶ್ರೀ ಜಿ.ಎನ್.ನರಹರಿ, ಇವರು ಬೆಂಗಳೂರಿನ ಸಶಸ್ತ್ರ ಪೊಲೀಸ್ ತರಬೇತಿ ಶಾಲೆ ಯಲಹಂಕದಲ್ಲಿ ಅನುಯಾಯಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಜಿ.ಎನ್. ನರಹರಿ, ಅನುಯಾಯಿ, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಬೆಂಗಳೂರು ಆದ ನೀವು ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಪಡೆಯದೆ ಕರ್ತವ್ಯಕ್ಕೆ ದಿನಾಂಕ: 02–05–2009 ರಿಂದ 07–07–2009 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪ್ರಾಚಾರ್ಯರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19–8–2009ರ ಆದೇಶದಲ್ಲಿ ಅರ್ಜಿದಾರರಿಗೆ ದಿನಾಂಕ: 02–05–2009 ರಿಂದ 07–07–2009 ರವರೆಗೆ ಒಟ್ಟು 66 ದಿನಗಳನ್ನು ಸಂಬಳ ರಹಿತ ರಜೆ ಎಂದು ಪರಿಗಣಿಸಲಾಗಿದೆ ಹಾಗೂ ಇನ್ನು ಮುಂದೆ ಭವಿಷ್ಯದಲ್ಲಿ ಈ ರೀತಿ ಗೈರುಹಾಜರಾಗದೆ ಇರುವಂತೆ ಲಿಖಿತ ಎಚ್ಚರಿಕೆ ನೀಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ತರಬೇತಿ ಶಾಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ಜಾರಿಯಲ್ಲಿರುವುದರಿಂದ ಸದರಿ ನೌಕರರ ಪ್ರಕರಣವನ್ನು ಈ ನಿಯಮಗಳಡಿ ಕ್ರಮಕೈಗೊಳ್ಳುವಂತೆ ಅಪೀಲು ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–02–2010ರಲ್ಲಿ ಸೂಚಿಸಿರುತ್ತಾರೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 12 ರಡಿ ಕ್ರಮಕೈಗೊಂಡು ಮೇಲೆ ಕ್ರಮ ಸಂಖ್ಯೆ:3ರಲ್ಲಿ ಓದಲಾದ ದಿನಾಂಕ: 26–5–2010ರ ಆದೇಶದಲ್ಲಿ ಗೈರುಹಾಜರಾದ ದಿನಾಂಕ: 02–05–2009 ರಿಂದ 07–07–2009 ರವರೆಗಿನ ಒಟ್ಟು ಅವಧಿ 66 ದಿನಗಳನ್ನು ಸಂಬಳ ರಹಿತ ರಜೆಯೆಂದು ಪರಿಗಣಿಸಿ, ಇನ್ನು ಮುಂದೆ ಭವಿಷ್ಯದಲ್ಲಿ ಈ ರೀತಿ ಗೈರುಹಾಜರಾಗದಂತೆ ಲಿಖಿತ ಎಚ್ಚರಿಕೆ ನೀಡಲಾಗಿದೆ.

ಸದರಿ ಆದೇಶದ ವಿರುದ್ದ ಸಲ್ಲಿಸಿದ ಮೆಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ದಿನಾಂಕ: 06–9–2010ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಎತ್ತಿಹಿಡಿಯಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಬೇಜವಾಬ್ದಾರಿಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 181 ಪೊಸಿಅ 2010 ಬೆಂಗಳೂರು, ದಿನಾಂಕ: 22–7–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಜಿ.ಎನ್. ನರಹರಿ, ಅನುಯಾಯಿ, ಎ.ಪಿ.ಟಿ.ಎಸ್, ಯಲಹಂಕ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 26ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.805**
**SC.30**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಬಿಪಿಎಲ್ ಪಡಿತರ ಚೀಟಿಗಳಿಗೆ ನೀಡಲಾಗುವ ಆಹಾರಧಾನ್ಯ ಪ್ರಮಾಣದಲ್ಲಿ ಅಕ್ಕಿಯೊಂದಿಗೆ ಗೋಧಿಯನ್ನು ಖರೀದಿಸಲು ಸ್ವಇಚ್ಛೆಯಿಂದ ಬಯಸುವ ನಗರ/ಪಟ್ಟಣ ಪ್ರದೇಶದ ಬಿಪಿಎಲ್ ಪಡಿತರ ಚೀಟಿದಾರರಿಗೆ ಗೋಧಿಯನ್ನು ಪ್ರತಿ ಕಿಲೋಗೆ ರೂ. 3.00 ಹಾಗೂ ಎ.ಎ.ವೈ. ಪಡಿತರ ಚೀಟಿದಾರರಿಗೆ ರೂ. 1.00 ಕ್ಕೆ ಇಳಿಸಿದ ದರದಲ್ಲಿ ನಿಗಧಿತ ಪ್ರಮಾಣದಲ್ಲಿ ಜುಲೈ 2013ರ ಮಾಹೆಯಿಂದ ನೀಡುವಂತೆ ಉದ್ದೇಶಿಸಿ ದಿನಾಂಕ: 24.06.2013ರಂದು ಹೊರಡಿಸಿದ್ದ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಆನಾಸ 43 ಡಿಆರ್‌ಎ 2013, ದಿನಾಂಕ: 15.06.2013.

2) ಸರ್ಕಾರಿ ಆದೇಶ ಸಂಖ್ಯೆ: ಆನಾಸ 43 ಡಿಆರ್‌ಎ 2013, ದಿನಾಂಕ: 24.06.2013.

**ಪ್ರಸ್ತಾವನೆ:**

ಮೇಲೆ ಓದಲಾದ (2) ಸರ್ಕಾರದ ದಿನಾಂಕ: 24.06.2013ರ ಆದೇಶದಲ್ಲಿ ಸ್ವಇಚ್ಛೆಯಿಂದ ಗೋಧಿಯನ್ನು ಸ್ವೀಕರಿಸಲು ಮುಂದೆ ಬರುವ ನಗರ/ಪಟ್ಟಣ ಪ್ರದೇಶಗಳ ಬಿಪಿಎಲ್ ಪಡಿತರ ಚೀಟಿದಾರರಿಗೆ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ನೀಡಲಾಗುವ ಆಹಾರಧಾನ್ಯದ ಒಟ್ಟು ಪ್ರಮಾಣದಲ್ಲಿ ವ್ಯತ್ಯಾಸವಾಗದಂತೆ ನಗರ/ಪಟ್ಟಣ ಪ್ರದೇಶದ ಪಡಿತರ ಚೀಟಿದಾರರಿಗೆ ಒಂದು ಸದಸ್ಯ ಕುಟುಂಬಕ್ಕೆ ಈಗ ಅರ್ಹರಿರುವ 10 ಕಿಲೋ ಅಕ್ಕಿಯಲ್ಲಿ 5 ಕಿಲೋ ಅಕ್ಕಿಯ ಬದಲಿಗೆ ಗರಿಷ್ಠ 5 ಕಿಲೋ ಗೋಧಿ, ಎರಡು ಸದಸ್ಯ ಕುಟುಂಬಕ್ಕೆ ಈಗ ಅರ್ಹರಿರುವ 20 ಕಿಲೋ ಅಕ್ಕಿಯಲ್ಲಿ, 10 ಕಿಲೋ ಅಕ್ಕಿಯ ಬದಲಿಗೆ ಗರಿಷ್ಠ 10 ಕಿಲೋ ಗೋಧಿ, ಮೂರು ಸದಸ್ಯ ಹಾಗೂ ಹೆಚ್ಚಿನ ಸದಸ್ಯರ ಕುಟುಂಬಕ್ಕೆ ಈಗ ಅರ್ಹರಿರುವ 30 ಕಿಲೋ ಅಕ್ಕಿಯಲ್ಲಿ 10 ಕಿಲೋ ಅಕ್ಕಿಯ ಬದಲಿಗೆ 10 ಕಿಲೋ ಗೋಧಿಯನ್ನು ಪ್ರತಿ ಕಿಲೋಗೆ ರೂ.3.00 ರಿಂದ ರೂ.1.00ಕ್ಕೆ ಇಳಿಸಿದ ದರದಲ್ಲಿ ಗೋಧಿಯ ದಾಸ್ತಾನು ಲಭ್ಯತೆಯನ್ನು ಆಧರಿಸಿ ಜುಲೈ 2013ರ ಮಾಹೆಯಿಂದ ವಿತರಿಸಲು ಹಾಗೂ ಅಂತ್ಯೋದಯ ಅನ್ನ ಯೋಜನೆಯಡಿಯಲ್ಲಿ ಪ್ರತಿ ಪಡಿತರ ಚೀಟಿಗೆ ನೀಡುತ್ತಿರುವ 6 ಕಿಲೋ

ಗೋಧಿಯ ದರವನ್ನು ಸಹ ಜುಲೈ 2013ರ ಮಾಹೆಯಿಂದ ರೂ.2.00 ರಿಂದ 1.00ರ ದರಕ್ಕೆ ಇಳಿಸಿದ ದರದಲ್ಲಿ ವಿತರಿಸಲು ಆದೇಶಿಸಿರುವುದನ್ನು ಹಿಂತೆಗೆದುಕೊಳ್ಳಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 43 ಡಿಆರ್‌ಎ 2013, ಬೆಂಗಳೂರು ದಿನಾಂಕ: 01.07.2013**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆನಾಸ 43 ಡಿಆರ್‌ಎ 2013, ದಿನಾಂಕ:24.06.2013ರಲ್ಲಿ ಬಿ.ಪಿ.ಎಲ್. ಪಡಿತರ ಚೀಟಿದಾರರಿಗೆ ಅಕ್ಕಿಯ ಬದಲಿಗೆ ನಿಗಧಿತ ಪ್ರಮಾಣದ ಗೋಧಿಯನ್ನು ವಿತರಿಸಲು ಹಾಗೂ ಎ.ಎ.ವೈ. ಪಡಿತರ ಚೀಟಿಗೆ ನೀಡುವ ಗೋಧಿಯ ದರವನ್ನು ರೂ.2.00 ರಿಂದ ರೂ.1.00ಕ್ಕೆ ಇಳಿಸಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ಹಿಂಪಡೆದಿದೆ.

ಮುಂದುವರೆದಂತೆ, ಸರ್ಕಾರವು ಆದೇಶ ಸಂಖ್ಯೆ: ಆನಾಸ 43 ಡಿಆರ್‌ಎ 2013, ದಿನಾಂಕ: 15.06.2013ರಲ್ಲಿ ಬಿ.ಪಿಎಲ್. ಪಡಿತರ ಚೀಟಿದಾರರಿಗೆ ಒಂದು ಸದಸ್ಯ ಕುಟುಂಬಕ್ಕೆ 10 ಕಿಲೋ ಅಕ್ಕಿ ಎರಡು ಕುಟುಂಬ ಸದಸ್ಯ ಕುಟುಂಬಕ್ಕೆ 20 ಕಿಲೋ ಮತ್ತು ಮೂರು ಹಾಗೂ ಅದಕ್ಕಿಂತ ಹೆಚ್ಚು ಸದಸ್ಯರಿರುವ ಕುಟುಂಬಕ್ಕೆ ಗರಿಷ್ಠ 30 ಕಿಲೋ ಅಕ್ಕಿಯನ್ನು ಪ್ರತಿ ಕಿಲೋ ಅಕ್ಕಿಗೆ ರೂ. 3.00 ರಿಂದ ರೂ.1.00 ಕ್ಕೆ ಇಳಿಸಿದಂತೆ ಹಾಗೂ ಎಎವೈ ಪಡಿತರ ಚೀಟಿದಾರರಿಗೆ ಚಾಲ್ತಿಯಲ್ಲಿರುವಂತೆ 29 ಕಿಲೋ ಅಕ್ಕಿಯನ್ನು ಪ್ರತಿ ಕಿಲೊಗೆ ರೂ.1.00 ರಂತೆ ಇಳಿಸಿದ ದರದಲ್ಲಿ ಜುಲೈ 2013ರ ಮಾಹೆಯಿಂದ ವಿತರಿಸಲು ಹೊರಡಿಸಿರುವ ಆದೇಶವು ಯಥಾ ಪ್ರಕಾರ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR.810**

**SC.200**

## ಇಂಧನ ಸಚಿವಾಲಯ

**ಸಂಖ್ಯೆ: ಇಎನ್ 47 ಇಬಿಎಸ್ 2010, ಬೆಂಗಳೂರು, ದಿನಾಂಕ: 12–07–2013.**

**ತಿದ್ದುಪಡಿ**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 47 ಇಇಬಿ 2010 ದಿನಾಂಕ: 29.06.2012 ರಲ್ಲಿ ಹೊರಡಿಸಲಾದ ಆದೇಶವನ್ನು ಈ ಕೆಳಗಿನಂತೆ ತಿದ್ದಿ ಓದಿಕೊಳ್ಳತಕ್ಕದ್ದು.

**"ಸರ್ಕಾರಿ ಆದೇಶ ಸಂಖ್ಯೆ: ಇಎನ್ 47 ಇಬಿಎಸ್ 2010 ದಿನಾಂಕ: 29–06–2012"**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಸಮೀರ್ ಮಡಿಮನ್**

ಪೀಠಾಧಿಕಾರಿ,

ಇಂಧನ ಇಲಾಖೆ.

**PR.799**

## SOCIAL WELFARE SECRETARIAT

**No. SWD105 SAD 2013, Bangalore, Dated. 04.05.2013.**

**CIRCULAR**

**Sub:** SC/ST False Caste Certificates – the procedure for dealing with the complaints by the Government Departments / Public Sector Undertakings / Government Agencies etc.

It has been observed that the concerned establishment officers of the Government Departments and PSUs and other agencies are not clear about the procedures to be followed in case of the complaints received against the Government Officers / Officials who joined in the Government service on obtaining false caste certificate of SC/ST. The procedure prescribed in this regard is already explained in the Circular No. SWD 105 SAD 2013 dt. 08.04.2013 (Copy enclosed).

Therefore, it is once again clarified as follows.

"When the complaint is received against any officer / officials regarding SC/ST false caste certificate, the concerned Department / PSU / Agency / Society has to refer the matter for enquiry enclosing a copy of the complaint and the caste certificate submitted to the Department / PSU / Agency/ Society to ADGP, CRE Cell, Palace Road, Bangalore with copy to the concerned Deputy Commissioner of the District in which such certificate was obtained from the Tahasildar and to the Principal Secretary / Secretary, Social Welfare Department, Vikasa Soudha, Bangalore. On receipt of the complaint the CRE Cell will proceed further to make necessary enquiry and send the enquiry report to the District Level Caste Verification Committee headed by the Deputy Commissioner". Further procedure is already explained in the enclosed Circular. The Department / PSU / Agency need not give any notice for enquiry of calling explanation etc. to the concerned Officer / Official because, the Department / PSU / Agency is not the competent authority to cancel the Certificate. The Certificate has to be cancelled or other wise only by the concerned District Level Caste Verification Committee. Or in some cases the issuing authority i.e. the Tahasildar may also cancel the Certificate when he comes to know of the false certificate or some cases the certificate might not be issue at all by the Tahasildar (it may be forged one). The Department / PSU / Agency / Society has to take action of dismissal after the certificate is cancelled. The Department / PSU/Agency/Society etc. have to get the Caste validity certificate from District Level Caste Verification Committee before issuing the appointment order in all cases of SC/ST fresh appointment."

**Nanjundappa**

Deputy Secretary to Government -2 .

Social Welfare Department.

**PR.765**

**Sc.500**

## ಒಳಾಡಳಿತ ಸಚಿವಾಲಯ

**ವಿಷಯ:** ಅಕ್ರಮ ಗಣಿ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಕರಣದಲ್ಲಿ ಭಾಗಿಯಾಗಿರುವ ಪೊಲೀಸ್ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:**

1) ಉಪ ಪೊಲೀಸ್ ಆಯುಕ್ತರು, ಗುಪ್ತವಾರ್ತೆ, ಪ್ರಾಥಮಿಕ ತನಿಖಾಧಿಕಾರಿಗಳು, ಬೆಂಗಳೂರು ರವರ ಪತ್ರ ಸಂಖ್ಯೆ:ಡಿಸಿಪಿ/ಐಎನ್‌ಟಿ/84/2011 ದಿನಾಂಕ 26-11-2011.
2) ಸರ್ಕಾರದ ಇದೇ ಸಂಖ್ಯೆಯ ಪತ್ರ ದಿನಾಂಕ 21-02-2012.
3) ಸರ್ಕಾರದ ಇದೇ ಸಂಖ್ಯೆಯ ಪತ್ರ ದಿನಾಂಕ 19-03-2012.
4) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಲಾ(1)/48/2011 ದಿನಾಂಕ 09-04-2012.
5) ಸರ್ಕಾರದ ಆದೇಶ ಸಂಖ್ಯೆ:ಒಇ 18 ಪೊಸಿಪ 2012 ದಿನಾಂಕ 03-08-2012.
6) ಅಪರ ನಿಬಂಧಕರು, ವಿಚಾರಣೆ-2, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ:ಕಂಪ್ಲೆಂಟ್/ಲೋಕ್/ಬಿಸಿಡಿ-189/2007/ಎಆರ್‌ಇ(2) ದಿನಾಂಕ 07-06-2013.

ಗಣಿ ಪ್ರಕರಣದಲ್ಲಿ ಭಾಗಿಯಾಗಿದ್ದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸುವಂತೆ ಸರ್ಕಾರವು ನೀಡಿದ ನಿರ್ದೇಶನದಂತೆ ಡಿ.ಜಿ.ಪಿ ಯವರು 191 ಪೊಲೀಸ್ ಅಧಿಕಾರಿಗಳ ಹೆಸರು ಲೋಕಾಯುಕ್ತ ವರದಿಯಲ್ಲಿ ಇದ್ದುದನ್ನು ಗಮನಿಸಿ ಆ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಪಡೆಯಲು ಶ್ರೀ ಡಿಸೋಜಾ ಎಸ್.ಪಿ ರವರ ನೇತೃತ್ವದಲ್ಲಿ ಏಕ ಸದಸ್ಯ ಸಮಿತಿಯನ್ನು ರಚಿಸಿದ್ದರು. ಸದರಿ ಸಮಿತಿಯು ಲೋಕಾಯುಕ್ತ ವರದಿಯಲ್ಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ಮಾಹಿತಿಯನ್ನು ಸಂಗ್ರಹಿಸಿ ಡಿ.ಜಿ.ಪಿ ಅವರಿಗೆ ಮೇಲೆ ಓದಲಾದ (1)ರಲ್ಲಿ ವರದಿಯನ್ನು ಸಲ್ಲಿಸಿದೆ.

ಲೋಕಾಯುಕ್ತ ವರದಿಯಲ್ಲಿರುವ 191 ಅಧಿಕಾರಿಗಳ ಹೆಸರುಗಳನ್ನು ಪರಿಶೀಲಿಸಲಾಗಿ 97 ಅಧಿಕಾರಿಗಳ ವಿರುದ್ಧದ ಆರೋಪಗಳನ್ನು ನಿಖರವಾಗಿ ಗುರುತಿಸಲು ಮತ್ತು ಅವರ ವಿರುದ್ಧ ಸೂಕ್ತ ವಿಚಾರಣೆಗೆ ಆದೇಶಿಸಲು ಮಾಹಿತಿ ಲಭ್ಯವಿದ್ದು ಉಳಿದ 94 ಅಧಿಕಾರಿಗಳ ವಿರುದ್ಧದ ಆರೋಪಗಳನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗಿರುವುದಿಲ್ಲ ಎಂದು ಶ್ರೀ ವಿ.ಎಸ್.ಡಿಸೋಜ, ಎಸ್.ಪಿ ರವರು ಮೇಲೆ ಓದಲಾದ(1)ರ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಲೋಕಾಯುಕ್ತ ವರದಿಯಲ್ಲಿ ಉಲ್ಲೇಖಿಸಲಾಗಿರುವ 191 ಅಧಿಕಾರಿಗಳ ಹೆಸರುಗಳನ್ನು ಏಕ ಸಮಿತಿಯ ಸದಸ್ಯರು ಇವರಲ್ಲಿ 97 ಅಧಿಕಾರಿಗಳನ್ನು ಗುರುತಿಸಲಾಗಿದ್ದು, ಈ ರೀತಿ ಗುರುತಿಸಲಾಗಿರುವ 97 ಅಧಿಕಾರಿಗಳ ಪಟ್ಟಿಯಲ್ಲಿನ ಕ್ರಮ ಸಂಖ್ಯೆ.5,72,83 ರಲ್ಲಿರುವ ಅಧಿಕಾರಿಗಳು ಐ.ಪಿ.ಎಸ್. ಅಧಿಕಾರಿಗಳಾಗಿದ್ದು, ರಾಜ್ಯ ಪೊಲೀಸ್ ಸೇವೆಗೆ ಸೇರಿದ ಲಗತ್ತಿಸಿರುವ ಪಟ್ಟಿಯಲ್ಲಿರುವ ಉಳಿದ 94 ಅಧಿಕಾರಿಗಳ ವಿರುದ್ಧ ಕೂಡಲೇ ಶಿಸ್ತು ಕ್ರಮ ಜರುಗಿಸಲು ಅಗತ್ಯ ಕ್ರಮಕೈಗೊಳ್ಳುವಂತೆ ಪೊಲೀಸ್ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರನ್ನು ಕೋರಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಮಾನ್ಯ ಲೋಕಾಯುಕ್ತರವರು ಅಕ್ರಮ ಗಣಿಗಾರಿಕೆಗೆ ಸಂಬಂಧಿಸಿದಂತೆ 191 ಪೊಲೀಸ್ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ತಿಳಿಸಿದ್ದು, ತನಿಖಾಧಿಕಾರಿಯಾದ ಶ್ರೀ ವಿ.ಎಸ್.ಡಿಸೋಜ, ಉಪ ಪೊಲೀಸ್ ಆಯುಕ್ತರು, ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇವರ ತನಿಖಾ ವರದಿಯಂತೆ ಅಪರಾಧ ಸಾಬೀತುಪಡಿಸುವ ದಾಖಲೆಗಳು ಇಲ್ಲದಿರುವುದರಿಂದ, 191ರಲ್ಲಿ 97 ಅಧಿಕಾರಿಗಳ ವಿರುದ್ಧ ಸಹ ಕ್ರಮ ಜರುಗಿಸಲು ಸಾಧ್ಯವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಮುಂದುವರಿದು, corroborating evidence ಇದ್ದಲ್ಲಿ ಮಾತ್ರ ಕ್ರಮ ತೆಗೆದುಕೊಳ್ಳಬಹುದಾಗಿರುತ್ತದೆ ಎಂದು ತಿಳಿಸುತ್ತಾ, ಭ್ರಷ್ಟಾಚಾರ ನಿರ್ಮೂಲನ ಕಾಯಿದೆಯ ನಿರ್ವಹಣೆಯಲ್ಲಿ ಕರ್ನಾಟಕ ಲೋಕಾಯುಕ್ತ ರವರು ಪರಿಣಿತರಾಗಿರುವುದರಿಂದ, ಸದರಿ 94 ಡಿವೈ.ಎಸ್.ಪಿ ಮತ್ತಿತರ ಕೆಳ ವೃಂದದ ಪೊಲೀಸ್ ಅಧಿಕಾರಿಗಳ ವಿರುದ್ಧ, ಮುಂದಿನ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ ಕರ್ನಾಟಕ ಲೋಕಾಯುಕ್ತ ರವರಿಗೆ ವಹಿಸಬೇಕೆಂದು ಕೋರಿರುತ್ತಾರೆ. ಈ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯ ಕೋರಲಾಗಿದ್ದು, ಈ ಕೆಳಕಂಡಂತೆ ಕಾನೂನು ಇಲಾಖೆಯು ಅಭಿಪ್ರಾಯ ನೀಡಿರುತ್ತಾರೆ.

> " Whether 94 Police Officers/Officials (Non IPS Officers) whose names are appearing in Annexure-I (page 299-307) who have been indicated, in the report of Lokayukta, could be referred to Upa-Lokayukta, particularly in the absence of Lokayukta being appointed by the Government for the purpose of holding regular Departmental Enquiry against each one of them?
>
> Police Officers of IPS cadre, could come within the jurisdiction of DPAR, in initiating disciplinary enquiries against them.
>
> Cases pertaining to Police Officers, in the cadre of Superintendent of Police, Non IPS viz., Police Officers in the cadre of SP of KSPS and Police Officers of the cadre of Addl. SP, are coming within the jurisdiction of Lokayukta.
>
> Cases pertaining to Police Officers and Officials of the cadre of Dy.,S.P. and below, are coming within the jurisdiction of Upa-Lokayukta.

ಈ ಪ್ರಕರಣದಲ್ಲಿ ಭಾಗಿಯಾದಂತಹ ಐ.ಪಿ.ಎಸ್. ಅಧಿಕಾರಿಗಳ ವಿರುದ್ಧ ಉಲ್ಲೇಖ(3)ರಲ್ಲಿನ ದಿನಾಂಕ 19-03-2012ರ ಪತ್ರದಲ್ಲಿ ಸಿ.ಆ.ಸು.ಇ (ಸೇವೆಗಳು-4)ರಲ್ಲಿ ಶಿಸ್ತು ಕ್ರಮ ಜರುಗಿಸಲು ಕೋರಲಾಗಿದೆ. ಇನ್ನುಳಿದದಂತಹ ಎಸ್.ಪಿ (ನಾನ್ ಐಪಿಎಸ್) ವೃಂದದ ಕ್ರಮ ಸಂಖ್ಯೆ.1,11,23,32,50,55, ರಲ್ಲಿರುವ ಎಸ್.ಪಿ (ನಾನ್ ಐಪಿಎಸ್) ವೃಂದದ ಅಧಿಕಾರಿಗಳ ಬಗ್ಗೆ ಗೌರವಾನ್ವಿತ ಲೋಕಾಯುಕ್ತ ತನಿಖೆಗೆ ವಹಿಸಬೇಕಾಗಿದ್ದು ಪ್ರಸ್ತುತ ಸದರಿ ಹುದ್ದೆಯು ಖಾಲಿ ಇದ್ದು ಹುದ್ದೆ ಭರ್ತಿಯಾದ ಕೂಡಲೇ ಈ ಬಗ್ಗೆ ಕ್ರಮವಹಿಸಬಹುದು. ಉಳಿದಂತೆ ಡಿವೈ.ಎಸ್.ಪಿ ಮತ್ತಿತರ ಕೆಳ ವೃಂದದ 88 ಪೊಲೀಸ್ ಅಧಿಕಾರಿಗಳ ಬಗ್ಗೆ ಶಿಸ್ತು ಕ್ರಮ ಜರುಗಿಸಲು ಹಾಗೂ ಸದರಿ ತನಿಖೆಯನ್ನು ಕರ್ನಾಟಕ ಉಪ ಲೋಕಾಯುಕ್ತಕ್ಕೆ ವಹಿಸಿ ಮೇಲೆ (5)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 03-08-2012ರಲ್ಲಿ ಆದೇಶಿಸಲಾಗಿತ್ತು.

ಅಪರ ನಿಬಂಧಕರು, ವಿಚಾರಣೆ–2, ಕರ್ನಾಟಕ ಲೋಕಾಯುಕ್ತ ಇವರು ಮಹಾ ನಿರ್ದೇಶಕರು ಮತ್ತು ಆರಕ್ಷಕರ ಮಹಾ ನಿರೀಕ್ಷಕರವರು ಒದಗಿಸಲಾದ ಪೊಲೀಸ್ ಅಧಿಕಾರಿಗಳ ಹೆಸರು ಮತ್ತು ವಿಳಾಸವನ್ನೊಳಗೊಂಡ ಜೆರಾಕ್ಸ್ ಪ್ರತಿಯನ್ನು ಪರಿಶೀಲಿಸಿದ್ದು ಮಹಾ ನಿರ್ದೇಶಕರ ಪತ್ರವು ಸರ್ಕಾರಿ ಆದೇಶ ಸಂಖ್ಯೆ:ಒಇ 18 ಪೊಸಿಪ 2012 ದಿನಾಂಕ 03–08–2012ರ ಒಂದು ಭಾಗವೆಂದು ಪರಿಗಣಿಸಲಾಗುವುದಿಲ್ಲ. ಕಾರಣ ಸದರಿ ಪೊಲೀಸ್ ಅಧಿಕಾರಿಗಳ ಎಲ್ಲಾ ಮೂಲ ವಿವರಗಳೊಂದಿಗೆ ಹೆಸರು ಮತ್ತು ವಿಳಾಸ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ವಿಳಾಸ, ಸೇವೆಗೆ ಸೇರಿದ ದಿನಾಂಕ ಮತ್ತು ನಿವೃತ್ತಿ ದಿನಾಂಕವನ್ನೊಳಗೊಂಡ ಮಾಹಿತಿಯ ಅನುಬಂಧದ ಮೂಲ ಪ್ರತಿಯನ್ನು ಮಾರ್ಪಾಡಿಸಲ್ಪಟ್ಟ ಮೂಲ ಸರ್ಕಾರಿ ಆದೇಶದ ಭಾಗವೆಂದು ಮಾರ್ಪಡಿಸಿ ಕ್ರಮಕೈಗೊಳ್ಳುವಂತೆ ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 18 ಪೊಸಿಪ 2012, ಬೆಂಗಳೂರು, ದಿನಾಂಕ: 27–07–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಒಇ 18 ಪೊಸಿಪ 2012 ದಿನಾಂಕ 03–08–2012ರ ಅನುಬಂಧ–Iರ ಮೂಲ ಪ್ರತಿಯನ್ನು ಮಾರ್ಪಡಿಸಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ:ಸಿಬಿ(5)39/2011–12 ದಿನಾಂಕ 21–05–2013ರಲ್ಲಿ ಒದಗಿಸಿರುವ ಮಾಹಿತಿಯನ್ನು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧ–II ರಲ್ಲಿರುವ ಅಧಿಕಾರಿಗಳ ವಿರುದ್ಧ ಸಹ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 6 ಮತ್ತು 8ರನ್ವಯ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳ ನಿಯಮ 14(ಎ) ರನ್ವಯ ವಿಚಾರಣೆಯನ್ನು ನಡೆಸಲು ಕರ್ನಾಟಕ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

**ಅನುಬಂಧ–II**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಹುದ್ದೆ | ಅವಧಿ | ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|
| 6,9 | ದೇವರಾಜು, ಪಿ.ಎಸ್.ಐ | 17–01–2010 – 14–04–2010 | ಬಳ್ಳಾರಿ ಸಂಚಾರ ಪೊಲೀಸ್ ಠಾಣೆ | ಕೆ.ಟಿ.ಜೆ. ನಗರ ಪೊಲೀಸ್ ಠಾಣೆ, ದಾವಣಗೆರೆ |
| 11 | ಫಿರೋಜ್ ಮಹಮದ್, ಪಿ.ಎಸ್.ಐ | 14–04–2010 | ಬಳ್ಳಾರಿ ಸಂಚಾರ –2 ಪೊಲೀಸ್ ಠಾಣೆ | ರಿಪ್ಪನ್ ಪೇಟೆ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ |
| 12 | ಅಂಬರಾಯ ಕಾಮನಮನಿ, ಪಿ.ಎಸ್.ಐ | 21–11–2009 – 14–04–2010 | ಗಾಡಿಗುನೂರು ಪೊಲೀಸ್ ಠಾಣೆ | ಅನವಟ್ಟಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ |
| 18 | ಗೋವಿಂದಪ್ಪ, ಪಿ.ಎಸ್.ಐ | 21–12–2009 – 05–03–2010 | ಎಂ.ಎಂ.ಹಳ್ಳಿ ಪೊಲೀಸ್ ಠಾಣೆ | –– |
| 19 | ರಾಧಾಕೃಷ್ಣ ಹೆಚ್ | 01–12–2009 – 02–04–2010 | ಗುಡೇಕೋಟೆ ಪೊಲೀಸ್ ಠಾಣೆ | ಚಿತ್ರದುರ್ಗ ಗ್ರಾ॥ ಪೊಲೀಸ್ ಠಾಣೆ |
| 22 | ನಾಗರಾಜ್ ಎಂ ಮಾದಳ್ಳಿ, ಪಿ.ಎಸ್.ಐ | 15–01–2010 | ಹಡಗಲಿ ಪೊಲೀಸ್ ಠಾಣೆ | ಪಿ.ಐ, ಕರ್ನಾಟಕ ಲೋಕಾಯುಕ್ತ |
| 23 | ಹಗರಿ ಸಿ.ಪಿ.ಐ | 14–01–2010 | – | – |
| 24 | ಹಲಕುಂದಿ, ಸಿ.ಪಿ.ಐ | 16–12–2009 | – | – |
| 25 | ಎಸ್.ಎಸ್.ಹುಲ್ಲೂರು, ಪಿ.ಐ | 20–03–2010 | ಬಳ್ಳಾರಿ ಗ್ರಾ॥ವೃತ್ತ | ಷಹಾಬಾದ್ ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ |
| 26 | ಹೊಸಳ್ಳಿ ಬಿ.ಎಸ್. ಪಿ.ಎಸ್.ಐ | 14–01–2010 | ಹಮೀನಗಡ ಪೊಲೀಸ್ ಠಾಣೆ | ಲಿಂಗಸಗೂರು ಗ್ರಾ॥ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ |
| 28 | ಹಿರೆಹಾಳ್, ಪಿ.ಎಸ್.ಐ | 14–04–2010 | | |
| 31 | ರಮಾಕಾಂತ್ ವೈ.ಹುಲ್ಲೂರ ಪಿ.ಐ | 10–02–2010 | ಸಂಡೂರು ವೃತ್ತ, ಬಳ್ಳಾರಿ | ಡಿ.ಸಿ.ಆರ್.ಬಿ, ಕೊಪ್ಪಳ |
| 33 | ಎಸ್.ಹೆಚ್.ಕೇರಿ, ಡಿವೈ.ಎಸ್.ಪಿ | 21–11–2009 – 09–03–2010 | ಹೊಸಪೇಟೆ, ಡಿ.ಎಸ್.ಪಿ | ಡಿ.ಸಿ.ಆರ್.ಬಿ, ಬಾಗಲಕೋಟೆ |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಹುದ್ದೆ | ಅವಧಿ | ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳ | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|---|---|
| 34 | ಹೊಸಳ್ಳಿ ಬಿ.ಎಸ್., ಪಿ.ಎಸ್.ಐ | 14–01–2010 | ಇಳಕಲ್ ಪೊಲೀಸ್ ಠಾಣೆ(ಅಪರಾಧ–2) | ಲಿಂಗಸಗೂರು ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ |
| 35 | ಜಂಪರ್ ಪೊಲೀಸ್ ಠಾಣೆ | 01–12–2009 | – | – |

**ಟಿ.ಎನ್.ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಎ)

**PR.807**

## ಸಹಕಾರ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ: ಸಇ 132 ಎಸಸೇ 2008, ಬೆಂಗಳೂರು, ದಿನಾಂಕ 22–6–2013**

**ವಿಷಯ:** ಡಾ:ಇಫ್ತಿಕಾರ್ ಮೊಹಮ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು ಇವರ ವಿರುದ್ಧ ಶಿಸ್ತು ಕ್ರಮ – ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಇ 224 ಎಸಸೇ 2007, ದಿನಾಂಕ 13–8–2007.
2. ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ:ಡಿಎಸ್‌ಕೆ/ ಇಎಸ್‌ಟಿಎಸ್ /11/ 2007–08, ದಿನಾಂಕ 25–3–2009.
3. ಕಾರಣ ಕೇಳುವ ನೋಟಿಸ್ ಸಂಖ್ಯೆ:ಸಇ 132 ಎಸಸೇ 2008, ದಿನಾಂಕ 30–6–2009.
4. ಸರ್ಕಾರದ ಆದೇಶ ಸಂಖ್ಯೆ:ಸಇ 132 ಎಸಸೇ 2008, ದಿನಾಂಕ 25–01–2010 ಮತ್ತು ತಿದ್ದುಪಡಿ ಆದೇಶ ದಿನಾಂಕ 30–01–2010.
5. ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರ ಪತ್ರ ಸಂಖ್ಯೆ: ಸಿಬ್ಬಂದಿ /23/ ಇಜಿಪಿ/2010–11, ದಿನಾಂಕ 31–5–2010.
6. ಮೊದಲನೇ ಕಾರಣ ಕೇಳುವ ನೋಟಿಸ್ ಸಂಖ್ಯೆ:ಸಇ 132 ಎಸಸೇ 2008, ದಿನಾಂಕ 22–11–2010.
7. ಡಾ:ಇಫ್ತಿಕಾರ್ ಮೊಹಮ್ಮದ್ ಇವರ ಲಿಖಿತ ಹೇಳಿಕೆ ದಿನಾಂಕ 14–2–2011.
8. ಸರ್ಕಾರದ ಆದೇಶ ಸಂಖ್ಯೆ:ಸಇ 132 ಎಸಸೇ 2008, ದಿನಾಂಕ 30–4–2011.
9. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ 25–8–2011.
10. ಎರಡನೇ ಕಾರಣ ಕೇಳುವ ನೋಟಿಸ್ ಸಂಖ್ಯೆ:ಸಇ 132 ಎಸಸೇ 2008, ದಿನಾಂಕ 14–10–2011.
11. ಡಾ:ಇಫ್ತಿಕಾರ್ ಮೊಹಮ್ಮದ್ ಇವರ ಲಿಖಿತ ಹೇಳಿಕೆ ದಿನಾಂಕ 28–4–2012.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಅಧಿಸೂಚನೆಯನ್ವಯ ಡಾ:ಇಫ್ತಿಕಾರ್ ಮೊಹಮ್ಮದ್ ಇವರಿಗೆ ಕಾರ್ಯದರ್ಶಿ, ಮಹಾತ್ಮಗಾಂಧಿ ಸಹಕಾರ ಸಕ್ಕರೆ ಕಾರ್ಖಾನೆ ನಿ., ಬಾಲ್ಕಿ, ಬೀದರ್ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಕಬ್ಬು ಅಭಿವೃದ್ಧಿ ಆಯುಕ್ತರು ಹಾಗೂ ಸಕ್ಕರೆ ನಿರ್ದೇಶಕರ ಪತ್ರದೊಂದಿಗೆ ಡಾ:ಇಫ್ತಿಕಾರ್ ಮೊಹಮ್ಮದ್ ಸಹಕಾರ ಸಂಘಗಳ ಉಪ ನಿಬಂಧಕರು ಇವರು ಮಹಾತ್ಮಗಾಂಧಿ ಸಕ್ಕರೆ ಕಾರ್ಖಾನೆ ನಿ., ಬಾಲ್ಕಿ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ ಗೈರು ಹಾಜರಾಗಿದ್ದು ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸ್‌ನೊಂದಿಗೆ ದೋಷಾರೋಪಣಾ ಪಟ್ಟಿಗಳನ್ನು ಡಾ:ಇಫ್ತಿಕಾರ್ ಅಹ್ಮದ್ ಇವರಿಗೆ ಜಾರಿಗೊಳಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಆದೇಶಗಳನ್ವಯ ಸದರಿ ಅಧಿಕಾರಿಯವರಿಂದ ಕಾರಣ ಕೇಳುವ ನೋಟಿಸ್‌ಗೆ ಯಾವುದೇ ಉತ್ತರ ಸ್ವೀಕೃತವಾಗಿರುವುದಿಲ್ಲ ಮತ್ತು 2 ವರ್ಷಗಳಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಮೇಲೆ (5)ರಲ್ಲಿ ಓದಲಾದ ಸಹಕಾರ ಸಂಘಗಳ ಅಪರ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ಇವರ ಪತ್ರದಲ್ಲಿ ಸದರಿ ಅಧಿಕಾರಿಯವರ ಹೆಸರು ಡಾ:ಇಫ್ತಿಕಾರ್ ಮೊಹಮ್ಮದ್ ಎಂಬುದಾಗಿ ತಿಳಿಸಿ ದಾಖಲೆಯೊಂದಿಗೆ ಮಾಹಿತಿ ನೀಡಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯ ಅನುಬಂಧ 1–4ನ್ನು ಡಾ:ಇಫ್ತಿಕಾರ್ ಮೊಹಮ್ಮದ್ ಸಹಕಾರ ಸಂಘಗಳ ಉಪ ನಿಬಂಧಕರು ಇವರಿಗೆ ಜಾರಿಗೊಳಿಸಿ 15 ದಿನಗಳಲ್ಲಿ ಲಿಖಿತ ಹೇಳಿಕೆ ಸಲ್ಲಿಸುವಂತೆ ತಿಳಿಸಲಾಗಿತ್ತು.

ಮೇಲೆ (7)ರಲ್ಲಿ ಓದಲಾದ ಲಿಖಿತ ಹೇಳಿಕೆಯಲ್ಲಿ ಆಪಾದಿತ ಅಧಿಕಾರಿಯು ಕಾರಣ ಕೇಳುವ ನೋಟಿಸ್ ಹಾಗೂ ಅನುಬಂಧ 1–4ನ್ನು ಸ್ವೀಕರಿಸಿರುವುದಾಗಿ ತಿಳಿಸಿ ಅನುಬಂಧ 1ರಲ್ಲಿ ನಮೂದಿಸಿರುವ ಆರೋಪವನ್ನು ಅಲ್ಲಗಳೆಯಲಾಗಿದೆ ಎಂದು ಹಾಗೂ ಕೇಂದ್ರ ಸಚಿವರ ಆಪ್ತ ಕಛೇರಿಯಲ್ಲಿ ಕಾರ್ಯನಿರ್ವಹಿಸಿದ್ದು ಈ ಬಗ್ಗೆ ಸದರಿ ಸಚಿವರು ಆದೇಶ ಹೊರಡಿಸುವಂತೆ ರಾಜ್ಯ ಸರ್ಕಾರವನ್ನು ಕೋರಿರುತ್ತಾರೆ. ಆದೇಶ ಹೊರಡಿಸದೆ ಇರುವುದರಿಂದ ವೇತನ ಭತ್ಯೆ ಹಾಗೂ ಇತರೆ ಸೌಲಭ್ಯಗಳನ್ನು ಪಡೆದುಕೊಳ್ಳಲು ತೊಂದರೆಯಾಗಿದೆ ಎಂದು ವರದಿ ಮಾಡಿ ಪ್ರಸ್ತಾವಿತ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಮೇಲೆ (8)ರಲ್ಲಿ ಓದಲಾದ ಆದೇಶದನ್ವಯ ಆಪಾದಿತ ಅಧಿಕಾರಿಯವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಶ್ರೀ ತಿಮ್ಮಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು, ಕೇಂದ್ರ ಕಛೇರಿ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿದೆ.

ಮೇಲೆ (9)ರಲ್ಲಿ ಓದಲಾದ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯಲ್ಲಿ ಆಪಾದಿತ ಸರ್ಕಾರಿ ನೌಕರರು ದಿನಾಂಕ 4–7–2007 ರಂದು ಕಾರ್ಯದರ್ಶಿ, ಭದ್ರಾ ಸಹಕಾರ ಸಕ್ಕರೆ ಕಾರ್ಖಾನೆ ನಿ., ದೊಡ್ಡಬಾತಿ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು ಸರ್ಕಾರಕ್ಕೆ ನೇಮಕಾತಿ ಆದೇಶ ಪಡೆಯಲು ವರದಿ ಮಾಡಿಕೊಂಡಿದ್ದು ಸರ್ಕಾರದಿಂದ ನೇಮಕಾತಿ ಆದೇಶವನ್ನು ದಿನಾಂಕ 13–8–2007ರಲ್ಲಿ ಹೊರಡಿಸಿದ್ದರೂ ಕೆಲಸಕ್ಕೆ ಹಾಜರಾಗಿರುವುದಿಲ್ಲ ಮತ್ತು ಆ ದಿನಾಂಕದಿಂದ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವವರೆಗೂ ಸರ್ಕಾರದಲ್ಲಾಗಲೀ ನಿಬಂಧಕರ ಕಛೇರಿಯಲ್ಲಾಗಲೀ ಹಾಜರಾಗಿರುವುದಿಲ್ಲ. ದಿನಾಂಕ 9–5–2008 ರಂದು ಸಹಕಾರ ಸಂಘಗಳ ನಿಬಂಧಕರ ತಿಳುವಳಿಕೆ ಪತ್ರ ಅಂಚೆ ನೋಂದಣಿ ಮೂಲಕ ಆಪಾದಿತ ಸರ್ಕಾರಿ ನೌಕರರಿಗೆ ತಲುಪಿದ್ದರೂ ಕೆಲಸಕ್ಕೆ ಹಾಜರಾಗಿರುವುದಿಲ್ಲ ಮತ್ತು ಯಾವುದೇ ಪತ್ರ ವ್ಯವಹಾರ ಮಾಡಿರುವುದಿಲ್ಲ. ವಿಚಾರಣಾ ಸಂದರ್ಭದಲ್ಲಿ ಆದೇಶ ತಲುಪಿಲ್ಲ, ಆರೋಗ್ಯ ಸರಿಯಿಲ್ಲವೆಂದು ವೈದ್ಯಕೀಯ ಪ್ರಮಾಣ ಪತ್ರ ಹಾಜರು ಪಡಿಸುವುದು ಸರಿಯಾದ ಕ್ರಮವಲ್ಲ ಮತ್ತು ಅಮಾನತ್ತುಗೊಳಿಸುವವರೆಗೆ ಯಾವುದೇ ರಜೆ ಅರ್ಜಿ/ಮನವಿಯನ್ನು ವೈದ್ಯಕೀಯ ದೃಢೀಕರಣ ಪತ್ರದೊಂದಿಗೆ ಸರ್ಕಾರಕ್ಕೆ ನೀಡದೆ ಗೈರು ಹಾಜರಾದ ಆರೋಪವು ರುಜುವಾತಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ.

ಮೇಲೆ (10)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸ್‌ನೊಂದಿಗೆ ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಆಪಾದಿತ ಅಧಿಕಾರಿ – ಯವರಿಗೆ ಜಾರಿಗೊಳಿಸಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಮೇಲೆ (11)ರಲ್ಲಿ ಓದಲಾದ ಆಪಾದಿತ ಅಧಿಕಾರಿಯವರ ಲಿಖಿತ ಹೇಳಿಕೆಯಲ್ಲಿ ಸದರಿಯವರನ್ನು ಕಾರ್ಯದರ್ಶಿ, ಮಹಾತ್ಮಗಾಂಧಿ ಸಹಕಾರ ಸಕ್ಕರೆ ಕಾರ್ಖಾನೆ ನಿ., ಬಾಲ್ಕಿ ಹುದ್ದೆಗೆ ವರ್ಗಾವಣೆ ಮಾಡಿರುವ ಅಧಿಸೂಚನೆಯನ್ನು ಸೂಕ್ತವಾಗಿ ಜಾರಿಗೊಳಿಸಿಲ್ಲವೆಂದು ಮತ್ತು ಸ್ವೀಕೃತವಾಗಿರುವುದಿಲ್ಲವೆಂದು ಹಾಗೂ ಅನಾರೋಗ್ಯದ ನಿಮಿತ್ತ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗಿರುವುದಿಲ್ಲವೆಂದು ಹಾಗೂ ವಿಚಾರಣಾಧಿಕಾರಿಯವರು ವೈದ್ಯಕೀಯ ದಾಖಲೆಗಳನ್ನು ಸೂಕ್ತವಾಗಿ ಪರಿಶೀಲಿಸಿಲ್ಲವೆಂದು ತಿಳಿಸಿರುತ್ತಾರೆ.

ಮೇಲೆ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆಪಾದಿತ ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದ್ದು ಅಗತ್ಯ ದಾಖಲಾತಿಗಳೊಂದಿಗೆ ಮತ್ತು ಒದಗಿಬಂದ ಸಂದರ್ಭ ಸನ್ನಿವೇಶಗಳನ್ನು ಪರಿಗಣಿಸಿ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿ 1958ರ ನಿಯಮ 106(ಎ)ನ್ನು ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರನ್ವಯ ಡಾ:ಇಫ್ತಿಕಾರ್ ಮೊಹಮ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು ಇವರನ್ನು ಮುಂದಿನ ನಿಯೋಜನೆಗೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ:ಇಫ್ತಿಕಾರ್ ಮೊಹಮ್ಮದ್, ಸಹಕಾರ ಸಂಘಗಳ ಉಪ ನಿಬಂಧಕರು ಇವರು 2007 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಸದರಿಯವರನ್ನು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿ 1958ರ ನಿಯಮ 106(ಎ)ನ್ನು ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರನ್ವಯ ಸದರಿಯವರನ್ನು ಮುಂದಿನ ನಿಯೋಜನೆಗೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್.ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

**PR.803** ಸಹಕಾರ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2013–14ನೇ ಸಾಲಿಗೆ ಪ್ರಥಮ ವರ್ಷದ ಬಿ.ಇ. ಪ್ರವೇಶಾತಿ ಪ್ರಕ್ರಿಯೆ ಮುಗಿದ ನಂತರ ಖಾಲಿ ಉಳಿಯುವ ಸೀಟುಗಳನ್ನು ಲ್ಯಾಟರಲ್ ಎಂಟ್ರಿ ಮೂಲಕ ಬಿ.ಇ. 2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಡಿಪ್ಲೋಮಾಧಾರಕರುಗಳಿಂದ ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಪತ್ರ ಸಂಖ್ಯೆ: ಕೆಇಎ/ಲೀಗಲ್ ಸೆಲ್/ಸಿಆರ್–76/2011–12 ದಿನಾಂಕ: 01–03–2013.
2. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ: 25265/2012 c/w 25265/2009 ಮತ್ತು 27399/2010ರಲ್ಲಿ ದಿನಾಂಕ: 09–11–2012ರಂದು ನೀಡಿರುವ ಆದೇಶ.
3. 2013–14ನೇ ಸಾಲಿಗೆ ಎಐಸಿಟಿಇ ಹೊರಡಿಸಿರುವ ಮಾರ್ಗಸೂಚಿ/ಕೈಪಿಡಿ.
4. ಸರ್ಕಾರದ ಆದೇಶ ಸಂಖ್ಯೆ: ಇಡಿ 67 ಟಿಇಸಿ 2013 ದಿನಾಂಕ: 11ನೇ ಜೂನ್ 2013.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 09–11–2012ರಂದು ನೀಡಿರುವ ತೀರ್ಪಿನಲ್ಲಿ ಡಿಪ್ಲೋಮಾ ಲ್ಯಾಟರಲ್ ಎಂಟ್ರಿ ಮೂಲಕ ಬಿ.ಇ. 2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಪ್ರವೇಶಾತಿ ಪ್ರಕ್ರಿಯೆಯು ಪೂರ್ಣಗೊಂಡ ನಂತರ ಖಾಲಿ ಉಳಿಯುವ ಸೀಟುಗಳನ್ನು ಸಂಬಂಧಿಸಿದ ಕಾಲೇಜುಗಳಿಗೆ ಹಿಂತಿರುಗಿಸಿದ ಸಂದರ್ಭದಲ್ಲಿ ಸದರಿ ಖಾಲಿ ಸೀಟುಗಳನ್ನು ಆಡಳಿತ ಮಂಡಳಿಯಿಂದ ಭರ್ತಿ ಮಾಡಿಕೊಳ್ಳುವ ಬಗ್ಗೆ ನಿಯಮಗಳನ್ನು ರಚಿಸುವಂತೆ ಆದೇಶ ನೀಡಿರುತ್ತದೆ. ಸದರಿ ಆದೇಶದ ಹಿನ್ನೆಲೆಯಲ್ಲಿ ಕರ್ನಾಟಕ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿ ನಿಯಮಗಳು, 2006ಕ್ಕೆ ಸೂಕ್ತ ತಿದ್ದುಪಡಿಯನ್ನು ತರಲು ದಿನಾಂಕ: 31–01–2013ರಂದು ನಡೆದ ಆಡಳಿತ ಮಂಡಳಿ ಗೌರ್ನಿಂಗ್ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಅದರಂತೆ, ನಿಯಮಗಳಿಗೆ ಸೂಕ್ತ ತಿದ್ದುಪಡಿಯನ್ನು ತರುವಂತೆ ಕೋರಿರುತ್ತಾರೆ.

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಗಿನಂತೆ ತೀರ್ಪು ನೀಡಿರುತ್ತದೆ.

"16 (c) In the first instance, all the seats available under the Lateral Entry Scheme shall be treated as 100% Government quota and shall be filled by candidates who have applied against the Notification and who have taken the CET Examination and according to the merit list prepared after the CET Examination.

(d) If all the persons according to the CET list are accommodated and still if any seats remain un-filled, it is open to the Colleges to receive the application from persons who are eligible under the Rules to pursue their studies, who have not taken the CET Examination.

(e) On receipt of such applications, they shall forward the same to the CET Cell.

(f) The CET Cell shall scrutinize those application forms and the Certificates enclosed therein and if they are found eligible as per the Rules to pursue the studies, they shall permit the Managements to admit them in respect of un-filled seats and permit the students to pursue the studies.

(g) It is made clear, even in respect of those students, the fee chargeable is only what is prescribed by the Government. The Management shall not charge the fee prescribed for Management seats in the regular selection of candidates for the course. ;

ಮೇಲಿನ ಅಂಶಗಳಂತೆ ಸರ್ಕಾರವು ಪರಿಶೀಲಿಸಿ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿ ಪ್ರಕ್ರಿಯೆಗಳನ್ನು 31ನೇ ಜುಲೈ 2013ರೊಳಗೆ ಮುಗಿಸ –ಬೇಕಾಗಿರುವುದರಿಂದ ಕರ್ನಾಟಕ ವೃತ್ತಿಪರ ಶಿಕ್ಷಣ ಕೋರ್ಸುಗಳ ಪ್ರವೇಶಾತಿ ನಿಯಮಗಳು, 2006ರ ನಿಯಮಗಳಿಗೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಮಾನ್ಯ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ: 25265/2012 c/w ರಿಟ್ ಪಿಟಿಷನ್ ಸಂಖ್ಯೆ: 25265/2009 ಮತ್ತು 27399/2010ರ ಮೇಲೆ ನೀಡಿರುವ ಆದೇಶದಂತೆ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ 2013–14ನೇ ಸಾಲಿಗೆ ಬಿ.ಇ. ಪ್ರಥಮ ವರ್ಷದಲ್ಲಿ ಪ್ರವೇಶಾತಿ ಪ್ರಕ್ರಿಯೆ ಮುಗಿದ ನಂತರ ಖಾಲಿ ಉಳಿಯುವ ಸೀಟುಗಳನ್ನು ಲ್ಯಾಟರಲ್ ಎಂಟ್ರಿ ಮೂಲಕ ಬಿ.ಇ. 2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಡಿಪ್ಲೋಮಾಧಾರಕರುಗಳಿಂದ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಭರ್ತಿ ಮಾಡಲು ತೀರ್ಮಾನಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಎಐಸಿಟಿಇ ಮಾರ್ಗಸೂಚಿ / ಕೈಪಿಡಿಯಲ್ಲಿ ಬಿ.ಇ. 2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಲ್ಯಾಟರಲ್ ಎಂಟ್ರಿ ಮೂಲಕ ಬಿ.ಎಸ್ಸಿ. ಪದವೀಧರರಿಗೆ ಪ್ರವೇಶ ನೀಡಲು ಈ ಕೆಳಕಂಡಂತೆ ಅವಕಾಶ ಕಲ್ಪಿಸಿದೆ.

"B. Passed B.Sc. Degree from a recognized University as defined by UGC, with at least 45% marks (40% in case of candidates belonging to reserved category) and passed XII standard with mathematics as a subject.

C. Provided that in case of students belonging to B.Sc. Stream, shall clear the subjects of Engineering Graphics / Engineering Drawing and Engineering Mechanics of the first year Engineering program along with the second year subjects.

D. Provided further that, the students belonging to B.Sc. Stream shall be considered only after filling the supernumerary seats in this category with students belonging to the Diploma stream."

ಈ ಹಿನ್ನೆಲೆಯಲ್ಲಿ ಮೇಲೆ ಉಲ್ಲೇಖ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2013–14ನೇ ಸಾಲಿಗೆ ಬಿ.ಎಸ್ಸಿ. ಪದವೀಧರರಿಗೆ ಲ್ಯಾಟರಲ್ ಎಂಟ್ರಿ ಮೂಲಕ ಬಿ.ಇ. 2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಪ್ರವೇಶಾವಕಾಶ ಕಲ್ಪಿಸಲಾಗಿದೆ.

(1) ಡಿಪ್ಲೋಮಾಧಾರಕರುಗಳಿಗೆ ಲ್ಯಾಟರಲ್ ಎಂಟ್ರಿ ಮೂಲಕ ಪ್ರವೇಶಾತಿಗೆ ನಿಗದಿಪಡಿಸಿರುವ ಶೇ.20%ರಷ್ಟು ಸೀಟುಗಳನ್ನು ಪ್ರಥಮವಾಗಿ ಡಿಪ್ಲೋಮಾಧಾರಕರುಗಳಿಗೆ ಹಂಚಿಕೆ ಮಾಡಿ ನಂತರ ಖಾಲಿ ಉಳಿಯುವ ಸೀಟುಗಳನ್ನು ಬಿ.ಎಸ್ಸಿ. ಪದವೀಧರರುಗಳಿಗೆ ಹಂಚಿಕೆ ಮಾಡುವುದು;

(2) ಎಐಸಿಟಿಇ ನಿಯಮಾವಳಿಯಂತೆ, ಬಿ.ಎಸ್ಸಿ. ಅಭ್ಯರ್ಥಿಗಳು ಬಿ.ಎಸ್ಸಿ. ಪದವಿಯಲ್ಲಿ ಕನಿಷ್ಠ ಶೇ.45ರಷ್ಟು ಅಂಕ (ಪ.ಜಾ./ಪ.ಪಂಗಡದ ಅಭ್ಯರ್ಥಿಗಳಿಗೆ ಶೇ.40) ಪಡೆದಿರಬೇಕು ಮತ್ತು ದ್ವಿತೀಯ ಪಿ.ಯು.ಸಿ.ಯನ್ನು ಗಣಿತ ವಿಷಯದೊಂದಿಗೆ ತೇರ್ಗಡೆ ಹೊಂದಿರಬೇಕು.

(3) ಬಿ.ಎಸ್ಸಿ. ಅಭ್ಯರ್ಥಿಗಳು ಎಲ್ಲಾ ಸೆಮಿಸ್ಟರ್/ವರ್ಷದಲ್ಲಿ ಪಡೆದ ಒಟ್ಟು ಅಂಕಗಳನ್ನು ಪರಿಗಣಿಸುವುದು ಮತ್ತು ಬಿ.ಎಸ್ಸಿ. ಅಭ್ಯರ್ಥಿಗಳಿಗೆ ಪ್ರತ್ಯೇಕ ಸಾಮಾನ್ಯ ಪ್ರವೇಶ ಪರೀಕ್ಷೆ ಇರುವುದಿಲ್ಲ.

(4) ಡಿಪ್ಲೋಮಾಧಾರಕರುಗಳ ಪ್ರವೇಶಾತಿಗೆ ನಿಗದಿಪಡಿಸಿರುವ ಶೇ.20ರಷ್ಟು ಸೀಟುಗಳಲ್ಲಿ ಡಿಪ್ಲೋಮಾಧಾರಕರುಗಳಿಗೆ ಸೀಟು ಹಂಚಿಕೆಯಾದ ನಂತರ ಉಳಿಯುವ ಸೀಟುಗಳಿಗೆ ಮೆರಿಟ್ ಆಧಾರದ ಮೇಲೆ ಮತ್ತು ಮೀಸಲಾತಿ ನೀತಿಯನ್ವಯ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಮೂಲಕ ಬಿ.ಎಸ್ಸಿ. ಅಭ್ಯರ್ಥಿಗಳಿಗೆ ಪ್ರವೇಶ ಕಲ್ಪಿಸುವುದು.

ಈ ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ 2013–14ನೇ ಸಾಲಿಗೆ ಬಿ.ಇ. ಪ್ರಥಮ ವರ್ಷದಲ್ಲಿ ಪ್ರವೇಶಾತಿ ಪ್ರಕ್ರಿಯೆ ಮುಗಿದ ನಂತರ ಖಾಲಿ ಉಳಿಯುವ ಸೀಟುಗಳನ್ನು ಲ್ಯಾಟರಲ್ ಎಂಟ್ರಿ ಮೂಲಕ ಬಿ.ಇ. 2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಡಿಪ್ಲೋಮಾಧಾರಕರುಗಳಿಂದ ಹಾಗೂ ಬಿ.ಎಸ್ಸಿ. ಪದವೀಧರರಿಂದ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ವತಿಯಿಂದ ಭರ್ತಿ ಮಾಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 67 ಟಿಇಸಿ 2013 ಬೆಂಗಳೂರು, ದಿನಾಂಕ:27ನೇ ಜುಲೈ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವೃತ್ತಿ ಶಿಕ್ಷಣ ಕೋರ್ಸುಗಳ ಪ್ರವೇಶಾತಿ ನಿಯಮಗಳು, 2006ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಪಿಟಿಷನ್ ಸಂಖ್ಯೆ: 25265/2012 c/w ರಿಟ್ ಪಿಟಿಷನ್ ಸಂಖ್ಯೆ: 25265/2009 ಮತ್ತು 27399/2010ರ ಮೇಲೆ ನೀಡಿರುವ ಆದೇಶದಂತೆ ಪ್ರಥಮ ವರ್ಷದ ಬಿ.ಇ. ಪ್ರವೇಶಾತಿ ನಂತರ ಖಾಲಿ ಉಳಿಯುವ ಸೀಟುಗಳನ್ನು ಬಿ.ಇ.2ನೇ ವರ್ಷದ 3ನೇ ಸೆಮಿಸ್ಟರ್‌ಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತ ಮಂಡಳಿಯವರು ಲ್ಯಾಟರಲ್ ಎಂಟ್ರಿ ಮೂಲಕ **ಪ್ರಥಮವಾಗಿ ಡಿಪ್ಲೋಮಾದಾರರಿಗೆ ಸೀಟುಗಳನ್ನು ಹಂಚಿಕೆ ಮಾಡಿ ತದನಂತರ, ಉಳಿದ ಸೀಟುಗಳನ್ನು ಬಿಎಸ್ಸಿ ಪದವೀಧರರಿಗೆ** ಹಂಚಿಕೆ ಮಾಡಿಕೊಳ್ಳಲು ಅನುಮೋದನೆ ನೀಡಿದೆ.

i. ಲ್ಯಾಟರಲ್ ಎಂಟ್ರಿ ಪ್ರವೇಶಾತಿಗೆ ಸಂಬಂಧಿಸಿದಂತೆ ಖಾಸಗಿ ವೃತ್ತಿ ಶಿಕ್ಷಣ ಆಡಳಿತ ಮಂಡಳಿಗಳಲ್ಲಿ ಸ್ವೀಕೃತವಾಗುವ ಅರ್ಜಿಗಳನ್ನು ಪರಿಶೀಲನೆಗಾಗಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಕಳುಹಿಸುವುದು.

ii. ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನಿಯಮಗಳ ಪ್ರಕಾರ ಅರ್ಜಿಗಳನ್ನು ಪರಿಶೀಲಿಸಿ ಅರ್ಹತಾ ಪಟ್ಟಿಯನ್ನು ತಯಾರಿಸಿ ಸಂಬಂಧಪಟ್ಟ ಸಂಸ್ಥೆಗಳಿಗೆ ಕಳುಹಿಸುವುದು.

iii. ಆಡಳಿತ ಮಂಡಳಿಯವರು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ತಯಾರಿಸಿದ ಅರ್ಹತಾ ಪಟ್ಟಿಯಂತೆ ವಿದ್ಯಾರ್ಥಿಗಳ ಪ್ರವೇಶಾತಿ ಮಾಡಿಕೊಳ್ಳುವುದು.

iv. ಈ ರೀತಿಯ ಲ್ಯಾಟರಲ್ ಎಂಟ್ರಿ ಪ್ರವೇಶಾತಿಗೆ ಸರ್ಕಾರವು ನಿಗದಿಪಡಿಸಿದ ಶುಲ್ಕವನ್ನು ವಿಧಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ನಾಗಭೂಷಣ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**PR.801**

**SC.100**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು